ಗುಮಟೆಯ ಉಪಯೋಗ ಕೊಂಕಣಿ ಮಾತೃಭಾಷೆಯ ಸಮುದಾಯಗಳಲ್ಲಿ ಇದ್ದಷ್ಟು ಇತರ ಜನಾಂಗಗಳಲ್ಲಿ ಇಲ್ಲ ಎನ್ನುವುದು ಸ್ಪಷ್ಟ. ಆದುದರಿಂದಲೇ ಕೊಂಕಣಿ ಭಾಷೆಯ ನಂತರ 'ಗುಮಟೆ' ಯು ಕೊಂಕಣಿ ಸಂಸ್ಕೃತಿಯ ಒಂದು 'ಬಲಿಷ್ಟ ಸಂಕೇತ' ಅಂತ ಗೌರವ ಪಡೆದಿದೆ.

**ಕುಡುಬಿ ಸಮುದಾಯದಲ್ಲಿ ಗುಮಟೆ :**

ಅನಾದಿ ಕಾಲದಿಂದಲೂ ಗುಮಟೆಯನ್ನು ಉಪಯೋಗಿಸಿ ತನ್ನ ಸಂಸ್ಕೃತಿಯ ಧಾರ್ಮಿಕ ರೀತಿ ರಿವಾಜುಗಳಲ್ಲಿ ಗುಮಟೆಗೆ ಗೌರವದ ಸ್ಥಾನವನ್ನು ನೀಡಿದ ಕೊಂಕಣಿ ಮಾತೃಭಾಷೆಯ ಒಂದು ದೊಡ್ಡ ಸಮುದಾಯ ಕುಡುಬಿ ಜನಾಂಗ. ಕರಾವಳಿ ಪಟ್ಟಿಯಲ್ಲಿ ಕುಡುಬಿಯರು ಗುಮಟೆಗೆ, ಗುಮಟೆ ಹಾಡುಗಳಿಗೆ ಮತ್ತು ಗುಮಟೆ ನೃತ್ಯಕ್ಕೆ ತಮ್ಮ ಧಾರ್ಮಿಕ ವ್ಯವಸ್ಥೆಯಲ್ಲಿ ಪವಿತ್ರವಾದ ಸ್ಥಾನವನ್ನು ನೀಡಿದ್ದಾರೆ. ಈ ಕಲೆಯು ಕುಡುಬಿ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಉಳಿದುಕೊಂಡಿದೆ. ಮುಸ್ಲಿಂ ದಾಳಿಕೋರರ ಆಕ್ರಮಣ ಹಾಗೂ ಆಳ್ವಿಕೆಯ ಕಾಲದಲ್ಲಿ, ಆನಂತರ ಪೋರ್ಚುಗೀಸರ ಕಠಿಣ ದಬ್ಬಾಳಿಕೆಯ ಕಾಲದಲ್ಲಿ, ಇತರ ಧರ್ಮೀಯರು ಈ ಕಲೆಗೆ ಅಡಚಣೆ, ಅನಾದರಗಳನ್ನು ತಂದೊಡ್ಡಿದ ಸಂದರ್ಭಗಳಲ್ಲಿ, ತಾಂತ್ರಿಕ ನಗರ ನಾಗರೀಕತೆಯ ಆಧುನೀಕರಣದ ಪ್ರಭಾವಕ್ಕೆ ಒಳಗಾಗದೇ ಕುಡುಬಿಯರು, ಸ್ಥಿತ್ಯಂತರದಲ್ಲೂ ಸ್ಥಿತಪ್ರಜ್ಞರಾಗಿ ಪರಂಪರಾಗತವಾಗಿ ಈ ಗುಮಟೆ ಕಲೆಯ ವಿದ್ಯೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಇದಕ್ಕೆ ಪ್ರಮುಖ ಕಾರಣವೆಂದರೆ, ಕುಡುಬಿಯರು ಬಹಳ ನಿಷ್ಠೆ ಹಾಗೂ ಅಭಿಮಾನದಿಂದ ಆಚರಿಸಿಕೊಂಡು ಬರುತ್ತಿರುವ ಧಾರ್ಮಿಕ ಆಚರಣೆ 'ಹೋಳಿ'. ಈ ಹಬ್ಬಕ್ಕೆ ಗಮಟೆ ನೃತ್ಯ ಆಡಲೇಬೇಕೆಂಬ ನಿಯಮ ಖಡ್ಡಾಯವಾಗಿರುವುದರಿಂದ, ಗುಮಟೆ ಕುಣಿತ ತಮ್ಮ ಜಾತಿಯ ಪ್ರತಿಷ್ಠೆಗೆ ಕಡಿಮೆ ಎನ್ನುವ ಕೀಳರಿಮೆಯ ಭಾವನೆಗೆ ಒಳಗಾಗದುದರಿಂದ ಈ ಕಲೆಯು ಕುಡುಬಿ ಸಮಾಜದಲ್ಲಿ ಪರಂಪರಾಗತವಾಗಿ ಜೀವಂತವಾಗಿ ಉಳಿದುಕೊಂಡಿದೆ. ಕುಡುಬಿ ಜನಾಂಗದಲ್ಲಿ ಈ ಕಲೆಯು ಉಳಿದುಕೊಂಡಿರುವುದರಿಂದಲೇ ಇವರನ್ನು 'ಕುಡುಬಿಯರು' ಅಂತ ಗುರುತಿಸಲು ಸುಲಭಸಾಧ್ಯವಾಗಿದೆ. ಪ್ರಸ್ತುತ ಬಹುಶಃ ಕುಡುಬಿಯರಲ್ಲಿ ಇರುವಷ್ಟು ಗುಮಟೆಗಳು, ಗುಮಟೆ ಹಾಡುಗಳು ಹಾಗೂ ನೃತ್ಯ ವೈವಿಧ್ಯಗಳು ಇಂದಿನ ಸಮಾಜದಲ್ಲಿ ಇತರ ಯಾವುದೇ ಜಾತಿ ಯಾ ಪಂಗಡಗಳವರಲ್ಲಿ ಕಾಣಲು ಸಿಗುವುದಿಲ್ಲ ಎಂದರೆ ಅತಿಶಯವಾಗಲಿಕ್ಕಿಲ್ಲ.

ಗೋವಾದ ಮೂಲನಿವಾಸಿಗಳಾಗಿದ್ದ ಕುಡುಬಿಯರು ತಮ್ಮ ತಾಯ್ನೆಲ, ಮನೆಮಾರು, ಆಸ್ತಿ ಬದುಕು, ಎಲ್ಲವನ್ನು ಬಿಟ್ಟು ಇತರ ಪ್ರದೇಶಗಳಿಗೆ ದೇಶಾಂತರ ವಲಸೆ ಹೋಗಲು ಗುಮಟೆ ಕಲೆಗೆ ಅಡ್ಡಿಆತಂಕಗಳು ಏರ್ಪಟ್ಟಿರುವುದು ಖಚಿತ. ಸಾಮಾನ್ಯವಾಗಿ ಹೀಗೆ ವಲಸೆ ಬಂದಾಗ, ವಲಸೆ ಬಂದವರು ನೆಲೆನಿಂತು ಈ ಊರಿನವರೇ ಆಗಿಹೋಗುವಾಗ, ಆ ಊರಿನ ಈಗಾಗಲೇ ಬಲಿಷ್ಠವಾಗಿದ್ದ 'ಪ್ರಧಾನ ಸಂಸ್ಕೃತಿ' ಹೊಸತಾಗಿ ಬಂದ 'ಅಧೀನ ಸಂಸ್ಕೃತಿಯ' ಮೇಲೆ ಪ್ರಭಾವ ಬೀರುವುದು ಸಹಜ ಸ್ವಾಭಾವಿಕ. ಒಂದು ಜನಾಂಗವು ಬಹಳ ಕಾಲ

ಂದು ಸಂಸ್ಕೃತಿಯ ಜನರೊಂದಿಗೆ ಸಾಮಾಜಿಕವಾಗಿ ಹೊಂದಿಕೊಂಡು ಬಾಳಬೇಕಾದ
ಿ ಬಂದೊದಗಿದಾಗ ಅನಿವಾರ್ಯವಾಗಿ ಹೊಸ ಸಂಸ್ಕೃತಿಯ ಸಂವರ್ಧನೆಯಾಗುತ್ತದೆ
ದಾಗಿ ಸಮಾಜಶಾಸ್ತ್ರ ಪಂಡಿತರು ಅಭಿಪ್ರಾಯ ಪಡುತ್ತಾರೆ. ಆದರೆ ಈ ರೀತಿಯ ಎಳ್ಳಷ್ಟು
ವವೂ ತಮ್ಮ ಈ ಕಲಾ ಸಂಸ್ಕೃತಿಯ ಮೇಲೆ ಆಗದಿರುವಂತೆ ಕುಡುಬಿಯರು
ಕೊಂಡು ಬಂದಿರುವುದು ಕುಡುಬಿಯರ ಹೆಗ್ಗಳಿಕೆ.

ಕುಡುಬಿಯರು ತಮ್ಮ ಧಾರ್ಮಿಕ ಹಿನ್ನೆಲೆಯ ಜಾನಪದ ಕಲೆಗೆ ಗುಮಟೆಯನ್ನು
ಯೋಗಿಸುವ ಹಬ್ಬ ಹೋಳಿ (ಫಾಲ್ಗುಣ ಪ್ರತಿಪದಾ). ಹೋಳಿಯ ಈ ಉತ್ಸವವು
ಳ್ಳುವ ಮಾಸ 'ಶಿಗ್ಮೊ ಮಾಸ್'. ಶಿವರಾತ್ರಿಯಿಂದ ಪ್ರಾರಂಭವಾಗಿ ಸಂವತ್ಸರ ಪಾಡ್ಯ
ಸ್ಸಾರ್ ಪಾಡ್ವೊ = ಗುಡಿಪಾಡ್ವಾ = ಚಾಂದ್ರಮಾನ ಯುಗಾದಿ) ವರೆಗಿನ ಕಾಲ 'ಶಿಗ್ಮೊ
'. ಹಿಂದಿನ ವರ್ಷ ಚಾಂದ್ರಮಾನ ಯುಗಾದಿಯಂದು ತೆಗೆದಿರಿಸಿದ ಗುಮಟೆಗಳನ್ನು
ಕ ಏಕಾದಶಿ `(ತುಳಸೀ ಪೂಜೆ) ವರೆಗೆ ಉಪಯೋಗಿಸಲು ಸಮಾಜದ ಧಾರ್ಮಿಕ ನಿಯಮ
' ನಿರ್ಬಂಧವಿದೆ. ವೈಚಾರಿಕ ಕೃಷ್ಟಿಯಿಂದ ನೋಡಿದರೆ ದೈಹಿಕ ಶ್ರಮದ ಕೃಷಿ ಮಾಡಿ
ನ ಸಾಗಿಸುವ ಕುಡುಬಿಯರಿಗೆ ಯುಗಾದಿಯಿಂದ ಪ್ರಾರಂಭಿಸಿ ಶಿವರಾತ್ರಿ ಪರ್ಯಂತ
ಂಬಂಧ ಕೆಲಸಗಳಿಂದಾಗಿ ಬಿಡುವು ಇಲ್ಲದಿರುವುದು, ಗುಮಟೆ ಕಲೆಗೆ ಗಮನ ಹರಿಸಿದರೆ
ಾಡುವ ಕೃಷಿ ಕಾಯಕಕ್ಕೆ ತೊಂದರೆಯಾಗುವುದು ಇದಕ್ಕೆ ಕಾರಣವಾಗಿರಬಹುದು. ತುಳಸೀ
ು ನಂತರ ಬೆಳೆ ಕೊಯ್ಲು ಮುಗಿದು ಸ್ವಲ್ಪ ಬಿಡುವು ಸಿಗುವುದರಿಂದ, ಹಿಂದಿನ ವರ್ಷ
ು ಮಾಡಿಗೆ ಕಟ್ಟಿ ತೆಗೆದಿರಿಸಿದ ಗುಮಟೆಗಳನ್ನು ತುಳಸೀಪೂಜೆಯ ದಿನ ತೆಗೆಯಬಹುದು,
ತೆಗೆಯಬೇಕೆಂಬ ಕಟ್ಟುಕಟ್ಟಳೆಯನ್ನು ಮಾಡಿಕೊಂಡು ಪಾಲಿಸುತ್ತಾ ಬಂದಿದ್ದಾರೆ. ಆ
ಕುಟುಂಬಸ್ಥರು, ನೆಂಟರಿಷ್ಟರು ಸೇರಿ, ದೇವರ ಸ್ಮರಣೆಗಾಗಿ 'ನೊಮೊನ್' (ಪ್ರಾರ್ಥನೆ,
) ಹಾಡು ಹಾಡಿ, ಗುಮಟೆ ಬಾರಿಸಿ ನೃತ್ಯಾಭ್ಯಾಸಕ್ಕೆ ನಾಂದಿ ಹಾಡುತ್ತಾರೆ.

ತುಳಸೀಪೂಜೆಯ ನಂತರ ಶಿವರಾತ್ರಿವರೆಗೆ ಪ್ರತಿದಿನವೂ ಗುಮಟೆ ಕುಣಿತ ಮತ್ತು
ಗಳ ಅಭ್ಯಾಸ ಮಾಡಲು ಹಾಗೂ ಪರಿಣತಿ ಹೊಂದಲು, ಧಾರ್ಮಿಕ ರಿವಾಜು ಪ್ರಕಾರ
ೋದನೆಯಿದೆ. ಈ ಅಭ್ಯಾಸ ಯಾ ಪರಿಣತಿ ಪಡೆಯುವ ಜಾಗ ವಾಡೆಯ (ಕೂಡುಕಟ್ಟಿನ)
ರನ ಮನೆಯಂಗಳ ಅಥವಾ ಹತ್ತು ಸಮಸ್ತರು ಸೇರಿ ಹೋಳಿಯ ಕ್ರಮಬದ್ಧ ಆಚರಣೆಗಳು
ವ ಜಾಗ 'ಮಾಂಡ್' ಹೊರತು ಪಡಿಸಿ, ಜಾತಿಯ ಕೂಡುಕಟ್ಟಿನ ಯಾವುದೇ ಮನೆಯ
ವೇ ಆಗಿರಬಹುದು ಅಥವಾ ಗದ್ದೆ ಯಾ ಬಯಲು ಜಾಗವೂ ಆಗಬಹುದು, ಆದರೆ
ತ್ರಿಯ ಅಮಾವಾಸ್ಯೆಯ ರಾತ್ರಿ 'ರಾಯಭಾರಿ' (ಒತ್ತು ಗುರಿಕಾರ) ಅಥವಾ 'ಮಾಂಡ್'
ನಿಷ್ಟ ಮನೆಗೊಬ್ಬ ಪುರುಷರು ತಪ್ಪದೇ ಒಟ್ಟು ಸೇರಿ ಗುಮಟೆ ಆಡುವುದು ಸಂಪ್ರದಾಯ.

ಕುಡುಬಿಯರು 'ವಾಡೆ' (A Kudubi council or authority) ಎಂಬ

ಸಂಘಟನೆಗಳಲ್ಲಿ ವ್ಯವಸ್ಥಿತ ರೀತಿಯಲ್ಲಿ ಜೀವನ ನಡೆಸುತ್ತಾರೆ. ನಿರ್ದಿಷ್ಟ ಪ್ರಾದೇಶಿಕ ವ್ಯಾಪ್ತಿಯೊಳಗೆ ಸ್ವಜಾತಿಯ ವಿವಿಧ 'ಕುಳಿ' (ಬೆಡಗು, ಗೋತ್ರ) ಗಳಿಗೆ ಸೇರಿದ ಕುಡುಬಿಯರು ಒಂದೇ 'ಮಾಂಡ್' ನಲ್ಲಿ ಒಟ್ಟು ಸೇರಿ ಧಾರ್ಮಿಕ ಮುಖಂಡ 'ಗುರಿಕಾರನ' ಮುಂದಾಳ್ತನದಲ್ಲಿ, ತಮ್ಮ ಸಮುದಾಯದ ರೀತಿ ರಿವಾಜುಗಳನ್ನು ನಡೆಸಿಕೊಡು ಹೋಗುವ ಸಂಸ್ಥೆಗೆ 'ವಾಡೆ' ಎಂದು ಹೆಸರು. ಗುರಿಕಾರನ ಅನುಪಸ್ಥಿತಿಯಲ್ಲಿ ಆತನಿಗೆ ಸಹಾಯಕನಾಗಿ 'ರಾಯಭಾರಿ' ಅಥವಾ ಒತ್ತು ಗುರಿಕಾರ'ಯಾ ಸಮುದಾಯದ ಜನತೆಯಿಂದ ನೇಮಿಸಲ್ಪಟ್ಟ ಜವಾಬ್ದಾರಿಯ ವ್ಯಕ್ತಿ ರೀತಿ ರಿವಾಜುಗಳನ್ನು ನಡೆಸಿಕೊಂಡು ಹೋಗಲು ಅಧಿಕಾರಸ್ಥನಾಗಿರುತ್ತಾನೆ. ಗುರಿಕಾರ ಮತ್ತು ರಾಯಭಾರಿ ಭಿನ್ನಬೆಡಗುಗಳವರು ಆಗಿರುವುದರಿಂದ, ಹೊಲೆಸೂತಕಗಳು ಬಂದ ಸಂದರ್ಭದಲ್ಲಿ ಒಂದಿಲ್ಲೊಂದು ಬೆಡಗಿನ ವ್ಯಕ್ತಿ ಧಾರ್ಮಿಕ ಕಾರ್ಯ ಮತ್ತು ರೀತಿ ರಿವಾಜುಗಳನ್ನು ಬಾಕಿ ಇಡದೆ, ಕ್ರಮಪ್ರಕಾರ ನಡೆಸಿಕೊಂಡು ಬರಬೇಕು ಎಂಬ ಉದ್ದೇಶದಿಂದ ಈ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ.

ಕುಡುಬಿ ಸಮುದಾಯದಲ್ಲಿ ಗುಮಟೆ ಕಲೆಯನ್ನು ಹೊಂದಿದ ಎರಡು ದೊಡ್ಡ ಪಂಗಡಗಳೆಂದರೆ, 'ಕೊಡಿಯಾಲ್ ಕುಡುಬಿ' ಮತ್ತು ಗೊಂಯ್ಕಾರ್ ಕುಡುಬಿ' ಶಿವರಾತ್ರಿಯ ಅಮಾವಾಸ್ಯೆ ದಿವಸ ರಾತ್ರಿಗೆ ರಾಯಭಾರಿಯ ಮನೆಯಂಗಳದಲ್ಲಿ ಗುಮಟೆ ಕುಣಿತಕ್ಕೆ ಸೇರುವುದು (ವಾಡೆವಾರು ಆಚರಣಾ ಭೇದಗಳಿರಬಹುದು) ಕೊಡಿಯಾಲ್ ಕುಡುಬಿಯರು. ಹೀಗೆ ಅಲ್ಲಿ ಪ್ರಾರಂಭವಾದ ಗುಮಟೆ ನೃತ್ಯ, ಕೋಲಾಟದೊಂದಿಗೆ ಹೋಳಿಯ ಹಿಂದಿನ ದಿನದ (ತ್ರಯೋದಶಿ) ವರೆಗೆ ಅಲ್ಲಿಯೇ ಮುಂದುವರಿಯಬಹುದು. ಆದರೆ ಹೋಳಿಯ ದಿನ (ಚತುರ್ದಶಿ) ರಾತ್ರಿ ಗುರಿಕಾರನ ಅಂಗಳ ಅಥವಾ 'ಮಾಂಡ್' ನಲ್ಲಿ ವಾಡೆಯ ಎಲ್ಲಾ ಕಲಾಕಾರರೂ ಸೇರಿ ಗಮಟೆ ಬಾರಿಸಿ ಆಡುವುದು ಖಡ್ಡಾಯವಾಗಿದೆ. ಈ ಕ್ರಮಕ್ಕೆ 'ಮಾಂಡಾರ್ ಮೆಳ್ಚೆಂ' (ಮಾಂಡ್‌ನಲ್ಲಿ ಸೇರುವುದು) ಅನ್ನುತ್ತಾರೆ. ಈ ರೀತಿ ಹೋಳಿ ಹುಣ್ಣಿಮೆಯಿಂದ ಮುಂದಿನ ಅಮಾವಾಸ್ಯೆವರೆಗೆ ಆಚರಿಸಲ್ಪಡುವ ಹೋಳಿ ಉತ್ಸವವು ಗೋವಾದಲ್ಲಿ 'ವ್ಹಡ್ಲೊ ಶಿಗ್ಮೊ' ಅಂತ ಪ್ರಸಿದ್ಧ.

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಕಾರ್ಕಳ, ಬಂಟ್ವಾಳ ತಾಲೂಕುಗಳಲ್ಲಿರುವ ಸುಮಾರು 25 ವಾಡೆಗಳಿಗೆ 'ಕೊಂಪದವು' ಊರಿನಲ್ಲಿರುವ ವಾಡೆಯೇ ಒಂದನೇ ಸ್ಥಾನದ ಗೌರವವನ್ನು ಹೊಂದಿದ ವಾಡೆ. ಈ ವಾಢೆಯ ಗುರಿಕಾರನಿಗೆ, ಬಾರಾ ವಾಡ್ಯಾಂಚೊ ಗುರ್ಕಾರ್, (ಹನ್ನೆರಡು ವಾಡೆಗಳ ಗುರಿಕಾರ) ಎಂಬ ಹೆಸರು ಇದೆ. ಕೊಂಪದವು ವಾಡೆಯಲ್ಲಿ ಮಾತ್ರ ಹೋಳಿ (ಫಾಲ್ಗುಣ ಪ್ರತಿಪದಾ) ಯಂದು ಮುಂಜಾನೆ ಸೂರ್ಯೋದಯಕ್ಕೆ ಸರಿಯಾಗಿ ಕಂಗು (Arecanut tree - Areca Catechu) ಸುಟ್ಟು ಕಾಮದಹನದ ಕ್ರಮವನ್ನು ಜರಗಿಸುತ್ತಾರೆ. ಗೋವಾದ ಹಲವು ಊರುಗಳಲ್ಲಿ ಈ ರೀತಿ ಕಂಗುಸುಟ್ಟು ಮಾಡುವ ಕಾಮದಹನದ ಕ್ರಮವನ್ನು ಸಾರ್ವತ್ರಿಕವಾಗಿ ಆಚರಿಸುತ್ತಾರೆ. ಕಂಗು ಕಡಿಯುವಾಗ ಗುಮಟೆ

'ನೊಮೊನ್' ಎಂಬ ಪ್ರಾರ್ಥನಾಗೀತೆ ಹಾಡುವುದು, ಕಂಗು ಸುಟ್ಟು ಆದ ನಂತರ ಸುತ್ತ ಗುಮಟೆ ಬಾರಿಸಿ ಕುಣಿಯುವುದು ಹಿಂದಿನಿಂದ ಪಾಲಿಸಿಕೊಂಡು ಬಂದ ಾಯ. ಈ ಆಚರಣೆಯ ಸಂದರ್ಭ ಎಲ್ಲಾ ವಾಡೆಗಳ ಕೊಡಿಯಾಲ್ ಕುಡುಬಿ ಜನ ್ತರೆ. ಆ ದಿವಸ ಹೋಳಿ ಹುಣ್ಣಿಮೆಯದು. ಹೋಳಿಯ ದಿವಸ ಆಯಾಯ 'ಮಾಂಡ್' ೇರಲು ಅನನುಕೂಲವಾದವರೂ ಹುಣ್ಣಿಮೆ ರಾತ್ರಿ ತಂತಮ್ಮ ಮಾಂಡ್‌ನಲ್ಲಿ ತಪ್ಪದೇ ್ತರೆ. ಇದು ಕೊಡಿಯಾಲ್ ಕುಡುಬಿಯರಲ್ಲಿ ಮಾತ್ರ ಕಂಡು ಬರುವ ಆಚರಣೆ. ಮೆಯ ರಾತ್ರಿ ಹೊರಟ ಗುಮಟೆ ಮೇಳವು ಐದು ದಿನ ವಾಡೆಯ ಪ್ರತಿಯೊಂದು ಭೇಟಿ ನೀಡಿ ಗುಮಟೆ ಮತ್ತು ಕೋಲಾಟ ಆಡುವುದು ರೂಢಿಯಲ್ಲಿದೆ. ಗುಮಟೆ ೊಂದಿಗೆ ಕೋಲಾಟವನ್ನೂ ಆಡುತ್ತಾರಾದರೂ ಗುಮಟೆಗೇ ಪ್ರಾಧಾನ್ಯ ಹೆಚ್ಚು. ಐದನೇ ಮೇಳವು ಮಾಂಡ್‌ಗೆ ಹಿಂದಿರುಗುತ್ತದೆ. ಅದು ಆಚರಣೆಯ ಕೊನೆಯ ದಿನ

ಮೇಳವು (Dance troupe) ಮಾಂಡ್ ಪ್ರವೇಶಿಸುವಾಗಲಾಗಲೀ, ನೊಮೊನ್ ವಾಗಲಾಗಲೀ ಅಥವಾ ದೇವರನ್ನು 'ಹೊರಾಂವ್ಚೆಂ' 'ಹೊಗಳ್ಸಂಚೆಂ' (ಸ್ತುತಿಸುವುದು) ದರ್ಭಗಳಲ್ಲಿ ಗುಮಟೆ ಬಾರಿಸುವುದೇ ಸಂಪ್ರದಾಯ. ಮೇಳವು ಹೊರಟು ಊರಿನಲ್ಲಿ ವಾಗ ದೇವಸ್ಥಾನ, ದೈವಸ್ಥಾನ, ಬಸದಿ ಅಥವಾ ಗುತ್ತಿನ ಮನೆಗೆ ಗೌರವ ಸಲ್ಲಿಸಲು ಕೆಯಲ್ಲೆ 'ಥಾಗ್' ಎಂಬ ಹಾಡನ್ನು ಹಾಡುವುದು ಕ್ರಮ. ಈ ಆಚರಣೆಗಳು ಗುಮಟೆ ುವುದರ ವಿನಃ ಜರಗುವುದಿಲ್ಲ. ಕೊನೆಯ ರಾತ್ರಿ ಮಂಗಳ ಹಾಡುವ ಆಚರಣೆ ಇಡೀ ಜರುಗತ್ತದೆ. ಗುಮಟೆ ನೃತ್ಯದಲ್ಲಿ ದೇವರನ್ನು ಹೊಗಳುವುದು (ಹೊಗೊಳ್ಸಚೆಂ, ಂವ್ಚೆ) ಕೊನೆಯ ಕಾರ್ಯಕ್ರಮ. ಇದಕ್ಕೆ 'ದಂಡವತ್ ಘಾಲ್ಚೆಂ' (ಮಾಂಡ್ ಮೊಡ್ಚೆಂ) ೂ ಹೇಳುತ್ತಾರೆ. ಈ ಕಾರ್ಯಕ್ರಮದ ನಂತರ ಗುಮಟೆ ಬಾರಿಸುವುದು ಕಟ್ಟುನಿಟ್ಟಾಗಿ ಸಲ್ಪಟಿದೆ. ದೇವರನ್ನು ಹೊಗಳುತ್ತಾ ಗುಮಟೆ ಬಾರಿಸುವಾಗ ನೇಮಿಸಲ್ಪಟ್ಟ 'ಘಡೊ' ಪಾತ್ರಿ) ದೇವಿಯ ಆವೇಶಭರಿತನಾಗಿ ವಾಡೆಯ ಜನರಿಗೆ ಅಭಯದಾನ ನೀಡುತ್ತಾನೆ. ಗುಮಟೆಗಳಿಗೆ ಪೂಜೆ ನಡೆಯುತ್ತದೆ. ತೆಂಗಿನ ಕಾಯಿ ಒಡೆದು, ಅದರ ನೀರನ್ನು ್‌ಮೇಲೆ ಚುಮುಕಿಸಿ, ಒಡೆದ ತೆಂಗಿನಕಾಯಿ ಹೋಳುಗಳನ್ನು ಗುಮಟೆಗಳ ಮುಂದಿರಿಸಿ, ಬೆಳಗಿ ಪೂಜಿಸುವ ಈ ಕ್ರಮಕ್ಕೆ 'ಥಳ್ ಥಂಡ್ ಕರ್ಚೆಂ' ಅನ್ನುತ್ತಾರೆ.

ಗೊಂಯ್ಕಾರ್ ಕುಡುಬಿಯರು ತುಳಸೀ ಪೂಜೆಯ ದಿವಸವೇ ಗುಮಟೆಗಳನ್ನು ತೆಗೆದು ಸದಲ್ಲಿ ನಿರತರಾಗುತ್ತಾರೆ. ಆದರೆ ಇವರ ಅಭ್ಯಾಸವನ್ನು ಶಿವರಾತ್ರಿ ಅಮಾವಾಸ್ಯೆಯ ಲು ಬರುವ ನವಮಿ ಪರ್ಯಂತ ನಡೆಸಬಹುದು. ಇವರು ದಶಮಿಯ ರಾತ್ರಿ 'ಮಾಂಡ್' ೇರಿ ಏಕಾದಶಿಯಂದು ಗುಮಟೆ ಮೇಳ ಹೊರಹೊರಟು ಐದು ದಿವಸ ವಾಡೆಯ ಊರಿನ ಪ್ರತಿಷ್ಠಿತ ಮನೆಗಳಲ್ಲಿ ಆಡಿ, ಹುಣ್ಣಿಮೆಯ ರಾತ್ರಿ ಕೊನೆಗೊಳಿಸುತ್ತಾರೆ. ಈ ಹೋಳಿ ಹುಣ್ಣಿಮೆಯ ಮುಂಚಿನ ಐದನೇ ದಿನದಿಂದ ಪ್ರಾರಂಭಿಸಿ ಹುಣ್ಣಿಮೆಯಂದು

ಕೊನೆಗೊಳ್ಳುವ ಹೋಳಿ ಉತ್ಸವಕ್ಕೆ ಗೋವಾದಲ್ಲಿ 'ಧಾಕ್ಟೊ ಶಿಗ್ಮೊ' ಎನ್ನುತ್ತಾರೆ.

ಈ ಆಚರಣೆಯನ್ನು ಕೊನೆಗೊಳಿಸಲು 'ಶಿಗ್ಮೊ' ಮಾಸದ ಅಮಾವಾಸ್ಯೆವರೆಗೆ ಮಾತ್ರ ವಾಯಿದೆ. ಅಮಾವಾಸ್ಯೆ ಕಳೆದರೆ ಆ ವರ್ಷದ ಮಟ್ಟಿಗೆ ಪುನಃ ಈ ಉತ್ಸವವನ್ನು ಆಚರಿಸುವಂತಿಲ್ಲ. ಯುಗಾದಿಯಂದು ಗುಮಟೆಗಳನ್ನು ತೆಗೆದಿರಿಸಿದರೆ, ಮುಂದಿನ ತುಳಸೀ ಪೂಜೆವರೆಗೆ ಗುಮಟೆಗಳನ್ನು ಬಳಸುವಂತಿಲ್ಲ. ಹಾಡು ಕುಣಿತಗಳಿಗೂ ಕಟ್ಟುನಿಟ್ಟಾಗಿ ಅವಕಾಶವಿಲ್ಲ. ಎಲ್ಲಾ ಧಾರ್ಮಿಕ ಆಚರಣೆಗಳಂತೆ ಕುಡುಬಿಯರ ಹೋಳಿಯ ಆಚರಣೆಯೂ ಕೆಲವು ವಿಧಿ ನಿಷೇಧಗಳಿಗೆ ಒಳಪಟ್ಟಿದೆ.

ಇವರ ಕಲಾವಿದರು ತಮ್ಮದೇ ಆದ ವಿಶೇಷ ರೀತಿಯಲ್ಲಿ ಶೃಂಗರಿಸಿಕೊಳ್ಳುತ್ತಾರೆ. ತಲೆಗೆ ದೊಡ್ಡ ರುಮಾಲು. ರುಮಾಲು, ಮುಚ್ಚುವಂತೆ ಮುಡಿದು ಸೊಂಟ ಮಟ್ಟಕ್ಕೆ ಇಳಿಬಿಟ್ಟ 'ಕನಕಾಂಬರ' (ಅಬ್ಬಲಿಗೆ- Unarmed orange nail dye = crossandra undulaefolia) ಹೂವಿನ ಮಾಲೆಗಳು, ರುಮಾಲಿನ ಮುಂಭಾಗದಲ್ಲಿ ಹಣೆಯ ಅಂಚುಗಳಲ್ಲಿ ಕಿವಿಯವರೆಗೆ ಮತ್ತು ಬೈತಲೆಗೆ 'ಸುರಗಿ' (Alexandrian Laurel = mammea suriga), 'ರೆಂಜೆ' ( west indian medler = mimusops elengi), 'ಮಲ್ಲಿಗೆ' (Jasmine = Jasminum Pubescens), ಹೂವುಗಳ ದಂಡೆ, ತುರಾಯಿ, 'ಇಡೀ ಅಂಗಿ' (ನಿಲುವಂಗಿ) ಧರಿಸಿ ಅದರ ಮೇಲ್ಗಡೆ ರಂಗಿನ ಪಟ್ಟೆ ಕತ್ತರಿ ಶಾಲು, ಸೊಂಟಕ್ಕೆ ಸೊಂಟಪಟ್ಟಿಯ ಮೇಲ್ಗಡೆ ಬೆಳ್ಳಿಯ ನೇವಳ, ಕಚ್ಚೆ ಬಿಗಿದು ಕಾಲ್ಗಳಿಗೆ ಗೆಜ್ಜೆ ಕಟ್ಟಿ, ತೋಳಿಗೆ ಇಳಿಬಿಟ್ಟ ಗುಮಟೆ - ಇವಿಷ್ಟು ಅವರ ವೇಷಭೂಷಣಗಳು. ಕೆಲವು ವಾಡೆಗಳಲ್ಲಿ ಇಡೀ ಅಂಗಿಯ ಬದಲಿಗೆ 'ಸೊಗೊ' (ಘಾಗ್ರೊ)ಎಂಬ ಯಕ್ಷಗಾನದಲ್ಲಿ ಬಳಕೆಯಾಗುವಂತಹ ರೂಪದ ತೊಡುಗೆಯನ್ನು ಧರಿಸುವುದೂ ವಾಡಿಕೆಯಲ್ಲುಂಟು (ಉದಾ : ಮೂಡಬಿದಿರೆ ಹತ್ತಿರದ ಪುತ್ತಿಗೆ ಶಕ್ತಿಪುರ, ಪುತ್ತಿಗೆ ಪದವು, ಮರಕಡ ಮೈಂದೇರಿ ವಾಡೆಗಳು) ಈ ರೀತಿಯ ತೊಡುಗೆ ಮರಾಠಿಗರಲ್ಲಿ ಹೆಚ್ಚಾಗಿ ಕಾಣಬಹುದು. ಗೊಂಯ್ಕಾರ್ ಕುಡುಬಿಯರು ರುಮಾಲಿನ ಮೇಲ್ಗಡೆ, ಹಣೆಯ ಮಧ್ಯ ಭಾಗದಲ್ಲಿ ' ವೊರ್ದ್‌ಣಿ' (ಹಟ್ಟಿಮುದ್ದ = The indian paradise = terpsiphone paradise) ಎಂಬ ಹಕ್ಕಿಯ ಬಾಲದ ಗರಿಗಳನ್ನು ಗೊಂಡೆಯ ತುರಾಯಿಯಂತೆ ಧರಿಸುತ್ತಾರೆ.

ಗುಮಟೆ ನೃತ್ಯ ಪುರುಷರು ಮಾತ್ರ ಆಡುವ ನೃತ್ಯ. ಮಹಿಳೆಯರಿಗೆ ಗುಮಟೆ ನೃತ್ಯಕ್ಕೆ ಅವಕಾಶವಿಲ್ಲ. ಮಹಿಳೆಯರ ದೈಹಿಕ ಪ್ರಕೃತಿ ಈ ನೃತ್ಯಕ್ಕೆ ಅನುಕೂಲವಲ್ಲದುದರಿಂದ ಸ್ತ್ರೀಯರಿಗಿಂತ ಹೆಚ್ಚು ತಾಕತ್ತುಳ್ಳ ಗಂಡಸರು ಮಾತ್ರ ಗುಮಟೆ ಆಡುವುದು ರೂಢಿಯಾಗಿ ಹೋಗಿದೆ. ಹೋಳಿ ಹಬ್ಬಕ್ಕೆ ಈ ಕಲೆಯನ್ನು ಬಲ್ಲ ಪ್ರತಿಯೊಬ್ಬ ಕುಡುಬಿ ಪುರುಷನೂ ಆಡಬೇಕೆಂಬ ನಿಯಮವನ್ನು ಪಾಲಿಸಿಕೊಂಡು ಬಂದಿರುವುದರಿಂದ, ಚಿಕ್ಕ ಪ್ರಾಯದ

ಗರಿಂದ ಹಿಡಿದು ನಡೆದಾಡಲು ಶಕ್ತರಾದ ಮುದುಕರವರೆಗೆ ಈ ಕಲೆಯನ್ನು ಅಭ್ಯಾಸ ತ್ತಾರೆ ಮತ್ತು ಹೋಳಿಯ ಉತ್ಸವದಲ್ಲಿ ಆಡುತ್ತಾರೆ. ಕುಡುಬಿಯರು ಉಡುಪಿ ಜಿಲ್ಲೆಯ ಳಿ ಅಂಗಡಿಯಲ್ಲಿ 22.-03-2005 ರಲ್ಲಿ ಹೋಳಿ ಸಮಾವೇಶ ಮತ್ತು ಪ್ರದರ್ಶನವನ್ನು ಬೃಹತ್ ರೀತಿಯಲ್ಲಿ ಆಯೋಜಿಸಿದ್ದರು. ಈ ಸಮಾವೇಶದಲ್ಲಿ ಸುಮಾರು ) ಕುಡುಬಿ ಗುಮಟೆ ನೃತ್ಯ ಕಲಾವಿದರು ಆಡಿದ್ದರು. ಮತ್ತು ಈ ಕಲಾವಿದರು ಉಡುಪಿ ು ಕುಂದಾಪುರ ತಾಲೂಕುಗಳವರು ಮಾತ್ರ ಆಗಿದ್ದರು. ಇಲ್ಲಿ ಒಂದೊಂದು ಯಲ್ಲೂ ನೂರಕ್ಕೂ ಮೇಲ್ಪಟ್ಟು ಗುಮಟೆಗಳಿವೆ. ಕುಡುಬಿಯರ ಜಾನಪದದ ಾಸದಲ್ಲಿ ಇದೊಂದು ಹೆಮ್ಮೆಯ ಚಾರಿತ್ರಿಕ ದಾಖಲೆಯ ಮೈಲುಗಲ್ಲಾಗಿ ಉಳಿಯುತ್ತದೆ. ಬಿಯರಲ್ಲಿ ಗುಮಟೆಗೆ ಎಷ್ಟು ಪ್ರಾಧಾನ್ಯತೆಯಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಗುಮಟೆ ಮೇಳ ಊರಿನಲ್ಲಿ ಆಡಲು ಹೊರಟರೆ ಪ್ರಥಮವಾಗಿ ಆಯಾಯ ಊರುಗಳ ಸ್ಥಾನ, ದೈವಸ್ಥಾನಗಳ ಎದುರು ಸೇವಾರೂಪದಲ್ಲಿ ಆಡಬೇಕು. ಹಾಗೇ, ಊರಿನ ಕೆಲವು ಷ್ಟ ಜಾಗಗಳಲ್ಲಿ, ಪ್ರತಿಷ್ಠಿತ ಮನೆಗಳಲ್ಲಿ ಆ ಮನೆಯವರು ಕರೆಯಲಿ ಕರೆಯದಿರಲಿ, ಾರ್ಥವಾಗಿ ಗುಮಟೆ ನೃತ್ಯವಾಡುವುದು ಸಂಪ್ರದಾಯ. ಹೆಚ್ಚಾಗಿ ಗುಮಟೆ ಮೇಳದವರನ್ನು ಾತ್ರಿಸಿಯೇ ಆಡಿಸುತ್ತಾರೆ. ಹೀಗೆ ಆಡುವುದರಿಂದ ಆಡಿದ ಮನೆಯ ಕಷ್ಟಸಂಕಷ್ಟಗಳು ಾರವಾಗಿ ಸುಖ ಸಮೃದ್ಧಿಯಾಗುತ್ತದೆ ಎಂಬ ನಂಬಿಕೆಯಿದೆ. ಆಡಿದ ಮನೆಗಳಲ್ಲಿ ದವರಿಗೆ 'ತಳಿಗೆ' (ಅಕ್ಕಿ , ತೆಂಗಿನಕಾಯಿ, ಬೆಲ್ಲ, ವೀಳ್ಯ) ಮತ್ತು ಆರ್ಥಿಕ ರೂಪದಲ್ಲಿ ರ ಧನ ಕಾಣಿಕೆಯಾಗಿ ನೀಡುತ್ತಾರೆ. ಈ ದಾನರೂಪದ ವಸ್ತು ಮತ್ತು ಹಣವು ಹೋಳಿಯ ಯು ದಿವಸದ ಧಾರ್ಮಿಕ ಕಾರ್ಯಗಳಿಗೆ ಮತ್ತು ವಾಡೆಯು ಸಾಮೂಹಿಕ ಭೋಜನದ ರ್ಯಗಳಿಗೆ ವ್ಯಯಿಸಲ್ಪಡುತ್ತದೆ.

ವಾಡೆಯೊಳಗಿನ ಕುಡುಬಿಯರ ಮನೆಗಳಲ್ಲಿ ಮೇಳದವರು ತಪ್ಪದೇ ಆಡಲೇ ಬೇಕು. ದವರನ್ನು ಕೈಮುಗಿದು, ಕಾಲುತೊಳೆದು ಸ್ವಾಗತಿಸಿ ಅಂಗಳದಲ್ಲಿ ಜಾಪೆ ಹಾಕಿ ಕೂರಿಸಿ ನೀರು, ಕವಳ (ಎಲೆಅಡಿಕೆ) ನೀಡಿ ಉಪಚರಿಸುತ್ತಾರೆ. ಗುಮಟೆ ಆಡಲು ಪ್ರಾರಂಭಿಸಿದಾಗ ದವರಿಗೆ ಅಕ್ಕಿ, ತೆಂಗಿನಕಾಯಿ ಗಂಧ, ವೀಳ್ಯ, ಕಾಣಿಕೆ, ಹೂವಿನ ಮಾಲೆಗಳು ಮತ್ತು ು ಗೋಸಂಪಗೆ ಹೂಗಳಿಂದ ಗೌರವ ನೀಡುತ್ತಾರೆ. ಖಡ್ಡಾಯವಾಗಿ ಪಾಲಿಸುವ ಈ ಕ್ಕೆ 'ತಳಿ ಕರ್ಚೆಂ' (ತಳಿಗೆ ಮಾಡುವುದು) ಅಂತ ಹೆಸರು. ಕೊಡಿಯಾಲ್ ಕುಡುಬಿಯರಲ್ಲಿ ರು ಯಜಮಾನ ಹಾಗೂ ಗೊಂಯ್ಕಾರ್ ಕುಡುಬಿಯರಲ್ಲಿ ಮನೆಯಜಮಾನ್ತಿ ತಳಿಗೆ ುವುದು ರೂಢಿಯಲ್ಲಿದೆ ಕಷ್ಟ ಕೋಟಲೆಗಳು ಬಂದಾಗ ಪರಿಹಾರಾರ್ಥವಾಗಿ, ತಮ್ಮ ರ್ಥ ಸಿದ್ಧಿಗಾಗಿ ವಾಡೆಯ 'ಹತ್ತು ಸಮಸ್ತರಿಗೆ ಭೋಜನ ನೀಡುತ್ತೇನೆ' ಅಂತ ಹರಕೆ ೊಳ್ಳುವುದು ಕುಡುಬಿಯರಲ್ಲಿ ಸರ್ವಸಾಮಾನ್ಯ ವಾಡಿಕೆಯಾಗಿದೆ. ಇಂತಹ ಸಂದರ್ಭದಲ್ಲಿ ೆ ಮತ್ತು ಗುಮಟೆ ನೃತ್ಯಕ್ಕೆ ಹೆಚ್ಚು ಪ್ರಾಧಾನ್ಯತೆ.

ಗುಮಟೆ ನೃತ್ಯಕಾರರು ಕುಣಿಯುತ್ತಿರುವಾಗ, ಆ ಮನೆಯ ಚಿಕ್ಕಮಕ್ಕಳನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಕುಣಿಯುವ ಕ್ರಮವಿದೆ. ಹೀಗೆ ಆಡುವುದರಿಂದ ಮಗುವಿನ ಆರೋಗ್ಯ ಸುಧಾರಿಸುತ್ತದೆ, ಪ್ರೇತಬಾಧೆ, ಕೆಟ್ಟಶಕ್ತಿಯ ದೃಷ್ಟಿ, ವಾಮಾಚಾರದ ಪರಿಣಾಮಗಳು ಆಗುವುದಿಲ್ಲ ಎಂದು ನಂಬುತ್ತಾರೆ. ಸಾಮಾನ್ಯವಾಗಿ ಗುರುತು ಪರಿಚಯವಿಲ್ಲದ ಅಪರಿಚಿತರನ್ನು ಅಥವಾ ಅಸ್ವಾಭಾವಿಕ ತೊಡುಗೆಗಳಲ್ಲಿ ಇರುವವರನ್ನು ಕಂಡ ತಕ್ಷಣ ಚಿಕ್ಕಮಕ್ಕಳು ಸಹಜವಾಗಿ ಹೆದರಿಕೊಳ್ಳುತ್ತವೆ. ಇಂತಹ ಮಕ್ಕಳ ಅಂಜಿಕೆ ನಿವಾರಣೆ ಇದರ ಮುಖ್ಯ ಉದ್ದೇಶವಿರಬೇಕು. ಹೀಗೆ, ಗುಮಟೆ ನೃತ್ಯದಲ್ಲಿ ಮಕ್ಕಳನ್ನು ಹೆಗಲ ಮೇಲೆ ಕೂರಿಸಿಕೊಂಡು ಆಡುವ ನೃತ್ಯಕ್ಕೆ ಉಡುಪಿ ತಾಲೂಕಿನ ಕೆಲವು ಪ್ರದೇಶಗಳಲ್ಲಿ ವಿಶೇಷ ಪ್ರಾಶಸ್ತ್ಯ ನೀಡುತ್ತಿದ್ದಾರೆ.

ತಾವೇ ಸೃಷ್ಟಿ ಮಾಡಿದ ಕಲೆಯಾದರೂ ಆ ಕಲಾಸೃಷ್ಟಿಗೆ ದೇವರ ಅನುಗ್ರಹವೇ ಕಾರಣ ಅಂತ ನಂಬುವ ಜನಾಂಗ ಕುಡುಬಿ. ನಂಬಿಕೆ ಆಚರಣೆಗಳೇ ನಮ್ಮ ಜನಪದ ಬದುಕಿನ ಜೀವಾಳ. ಅವು ಜನಪದರ ದೈನಂದಿನ ಜೀವನದೊಂದಿಗೆ ಹಾಸು ಹೊಕ್ಕಾಗಿ ಬಂದ ಮೌಲ್ಯಗಳು. ಜನಪದ ಬದುಕು ನಿಂತಿರುವುದೇ ಈ ನಂಬಿಕೆ, ಆಚರಣೆಗಳ ಅಡಿಪಾಯದ ಮೇಲೆ ತನ್ನ ಆರಾಧ್ಯ ದೈವಕ್ಕೆ ಮೂರ್ತರೂಪ ನೀಡಿ ಆ ಮೂರ್ತಿಯನ್ನು ಅಲಂಕರಿಸಿ, ಫಲ ಪುಷ್ಪ , ಜಲ, ಆಹಾರ, ಪಾನೀಯ ಸಮರ್ಪಿಸಿ, ಧೂಪ ದೀಪಾರತಿ ಬೆಳಗಿ ಗಂಧ ಕುಂಕುಮಗಳಿಂದ ಅರ್ಚಿಸಿ ಸ್ತುತಿಸುವ ಪದ್ಧತಿಯೊಂದಾದರೆ, ತಾನು ಆರಾಧಿಸುವ ದೈವಕ್ಕೆ ಒಂದು ರೂಪವನ್ನು ಕಲ್ಪಿಸಿ ಅದಕ್ಕನುಗುಣವಾಗಿ ವೇಷಭೂಷಣಗಳನ್ನು ತೊಟ್ಟು ಆಭರಣಗಳನ್ನು ಧರಿಸಿ ದೈವವನ್ನು ಶರೀರದಲ್ಲಿ ಆವಾಹನೆ ಮಾಡಿ, ತಾನೇ ದೈವಮಾಧ್ಯಮ ವ್ಯಕ್ತಿಯಾಗಿ ಆರಾಧಿಸಲ್ಪಡುವುದು ಇನ್ನೊಂದು ಆರಾಧನಾ ವಿಧಾನ. ಕುಡುಬಿಯರು ಗುಮಟೆಗಳಲ್ಲಿ ಆದಿಶಕ್ತಿ ಮಹಾದೇವಿಯ ಸಾನಿಧ್ಯ ಪ್ರತಿಷ್ಠಾಪಿಸಿ ಆರಾಧಿಸುವುದು ಒಂದು ಪದ್ಧತಿ. ಇನ್ನೊಂದು ಪದ್ಧತಿಯಲ್ಲಿ, ಕೋಡಿಯಾಲ್ ಕುಡುಬಿಯರು ತಮ್ಮಲ್ಲೆ ಒಬ್ಬ ಪರಿಣತ ಕಲಾಕಾರ ಬ್ರಹ್ಮಚಾರಿ ಬಾಲಕನನ್ನು ಆರಿಸಿ, ಮೇಳ ಹೊರಡುವ ಸಂದರ್ಭದಲ್ಲಿ 'ಭಾಂಗಾರ್ ಕಾಪಡ್' (ಭಂಗಾರ ಪಟ್ಟೆ ಸೀರೆ) ಕೊಟ್ಟು ಸಾಂಕೇತಿಕ ರೀತಿಯಲ್ಲಿ ಆದಿಶಕ್ತಿಯ ರೂಪದಲ್ಲಿ ಆತನನ್ನು ಶೃಂಗರಿಸುತ್ತಾರೆ. ಆತನು ಕೊನೆಯ ದಿವಸದ ಆಚರಣೆವರೆಗೂ ಶುದ್ಧಾಚಾರಗಳನ್ನು ಪಾಲಿಸುತ್ತಾ, ಸ್ನಾನಾದಿಗಳನ್ನು ಮಾಡಿ ದಿನಕ್ಕೊಂದು ಬಾರಿ ಮಧ್ಯಾಹ್ನ ಮಾತ್ರ ಊಟ ಮಾಡಬೇಕು. ಹತ್ತು ಸಮಸ್ತರಿಗೆ ಹರಕೆಯ ಅನ್ನದಾನ ಇದ್ದಲ್ಲಿ ಈತನಿಗೆ ವಿಶೇಷ ಸ್ಥಾನಮಾನವಿದೆ. ಈ ತರದ ಆಚರಣೆಗೆ 'ಮಾಯಿಕ್ ಫುಲಾಂ ಮಾಳ್ಚೆಂ' ( ದೇವಿಗೆ ಹೂ ಮುಡಿಸುವುದು) ಅನ್ನುತ್ತಾರೆ. ನೃತ್ಯಕಾರರು ಗುಮಟೆ ಆಡುವಾಗ ಆತನೂ ಅವರೊಟ್ಟಿಗೆ ಕುಣಿಯಬೇಕು. ಇದರಿಂದ ದೇವಿಯೇ ತಮ್ಮೊಂದಿಗೆ ಭಾಗವಹಿಸಿರುವ ದೈವಿಕ ಅನುಭವವನ್ನು ಕಲಾಕಾರರು ಹೊಂದುತ್ತಾರೆ. ಇಂತಹ ಆಚರಣೆ ಶಿಗ್ಮೋತ್ಸವ ಸಂದರ್ಭದಲ್ಲಿ ಗೋವಾದಲ್ಲಿಯೂ ಕಂಡುಬರುತ್ತದೆ. ಈ ಹರಕೆಯನ್ನು ಇತರ ಸಮಾಜದವರೂ

ೊಳ್ಳುವುದಿದೆ. ಈ ಹರಕೆಯಿಂದ ಪ್ರಾಮುಖ್ಯವಾಗಿ ಸಂತಾನಭಾಗ್ಯವಿಲ್ಲದವರಿಗೆ ಾಗುತ್ತದೆ, ಕಷ್ಟ ಸಂಕಷ್ಟಗಳು ಪರಿಹಾರವಾಗಿ ಸುಖಲಭಿಸುತ್ತದೆ ಎಂಬ ನಂಬಿಕೆಯಿದೆ.

ಗುಮಟೆ ಮೇಳವು ಹೊರಟನಂತರ, ಕೊನೆಯ ದಿವಸದವರೆಗೆ ನೃತ್ಯಕಾರ ಚರಣೆಯಲ್ಲಿರಬೇಕು. ಮೀನು ಮಾಂಸ ಸೇವನೆ, ಸ್ತ್ರೀ ಸಂಪರ್ಕ, ಹೊಲೆ ಸೂತಕ ರ ಸಹವಾಸ - ಇಂತಹ ಲೌಕಿಕ ಸುಖಭೋಗಗಳಿಂದ ದೂರವಿರಬೇಕು. ವಾಡೆಯ ದೇ ಮನೆಯಲ್ಲಿ ಇತರ ಯಾವುದೇ ಶುಭಕಾರ್ಯ, ಹಬ್ಬ, ಪೂಜೆ, ವಿವಾಹ, ಪ್ರಸ್ತ, ನ, ನಿಶೇಕಶಾಸ್ತ್ರ ಮುಂತಾದವುಗಳ ಆಚರಣೆ ನಿಷಿದ್ಧ. ಕುಟುಂಬದಲ್ಲಿ ಹೊಲೆಸೂತಕಗಳು ಲ್ಲಿ ನೃತ್ಯಕಾರನಿಗೆ ಅವುಗಳು ಅನ್ವಯವಾಗುವುದಿಲ್ಲ. ನೃತ್ಯಕಾರನಿಗೆ ಅಸೌಖ್ಯವಾದರೂ ೋಪಚಾರ ಮಾಡುವ ಕ್ರಮವಿಲ್ಲ. ಜನನ ಮರಣಗಳು ಸಂಭವಿಸಿದಾಗಲೂ ಅದರ ನೃತ್ಯಕಾರನಿಗೆ ತಟ್ಟುವುದಿಲ್ಲ.

ಗೊಂಯ್ಕಾರ್ ಕುಡುಬಿಯರಲ್ಲಿ ಗುಮಟೆ ಮೇಳ ಹೊರಡುವ ಮುಂಚಿನ ದಿವಸ ಪನ್ನೆ ಲು, ಗಡ್ಡ ಮೀಸೆ ಬೋಳಿಸುವುದು) ಮಾಡಿಕೊಂಡರೆ, ಹೋಳಿಯ ಮಂಗಳದ ವರೆಗೆ ಪುನಃ ಪನ್ನೆ ಮಾಡಿಕೊಳ್ಳಲಿಕ್ಕಿಲ್ಲ. ಕಾಲುಗಳಿಗೆ ಚಪ್ಪಲಿ ಧರಿಸುವಂತಿಲ್ಲ. ಆ ದಿವಸಗಳಲ್ಲಿ ಸ್ನಾನಾದಿಗಳನ್ನು ಮಾಡುವಂತಿಲ್ಲ. ಮುಡಿದ ಹೂವುಗಳನ್ನು ಾಯಿಸುವಂತಿಲ್ಲ. ಐದು ದಿನ ಮೊದಲು ಮನಬಿಟ್ಟರೆ, ಐದು ದಿನಗಳವರೆಗೆ ಪುನಃ ೊಳಗೆ ಹೋಗುವಂತಿಲ್ಲ. ಐದು ದಿನವೂ ಆಡುತ್ತಲೇ ಇರಬೇಕು. ಒಂದು ವಾಡೆಗೆ ಕಲಾಕಾರ ಆ ವಾಡೆಯಲ್ಲಿ ಮಾತ್ರ ಆಡಬೇಕು, ಇರಬೇಕು. ವಾಡೆಯಲ್ಲಿ ಮರಣ ಸಿದಲ್ಲಿ ಕಲಾಕಾರರಿಗೆ ಸುದ್ದಿ ಮುಟ್ಟಿಸಲಿಕ್ಕಿಲ್ಲ. ಮರಣದ ಸುದ್ಧಿ ಸಿಕ್ಕಿದರೂ ಅಂತ್ಯ ರಕ್ಕೆ ಕಲಾಕಾರನು ಹೋಗಬೇಕಾಗಿಲ್ಲ.

ಸಾಮಾನ್ಯವಾಗಿ ಜನಪದ ಸಮುದಾಯಗಳಲ್ಲಿ ಮನೋರಂಜನೆಗಾಗಿ ಸೃಷ್ಟಿಯಾಗುವ ಣಾತ್ಮಕ ಕಲೆಗಳು ಧಾರ್ಮಿಕ ಲೇಪನ ಪಡೆದುಕೊಳ್ಳುವುದನ್ನು ಸ್ವಾಭಾವಿಕವಾಗಿ ಹುದು. ನೃತ್ಯ, ಸಂಗೀತ, ಸಾಹಿತ್ಯದಂತಹ ಸಂಗತಿಗಳಲ್ಲಿ ಮಿಳಿತವಾದ ಕುಡುಬಿಯರ ಟೆ ನೃತ್ಯ ಧಾರ್ಮಿಕ ಚೌಕಟ್ಟಿನೊಳಗೆ ತನ್ನ ಅಸ್ತಿತ್ವವನ್ನು ಸಂಭಾಳಿಸಿಕೊಂಡು ರುವುದು ನಿಜಕ್ಕು ಮಹತ್ವದ್ದು. ಗುಮಟೆ ನೃತ್ಯದಲ್ಲಿ ಮನೋರಂಜನೆ ಮಾತ್ರವಲ್ಲ, ೋರಂಜನೆಗೆ ಪೂರಕವಾದ ಆಚರಣೆಯಲ್ಲಿ ಬಂದಿರುವ ಗುಮಟೆ ಪೂಜೆಯಲ್ಲಿ ಒಂದು ಮಿಳಿತವಾಗಿರುವುದರಿಂದ ಧಾರ್ಮಿಕ ಆಚರಣೆ ರೂಪುಗೊಂಡಿರುವುದು ವ್ಯಕ್ತವಾಗುತ್ತದೆ. ಚರಣೆಯನ್ನು ಬಾಕಿ ಮಾಡಿದರೆ ಕಷ್ಟ ನಷ್ಟಗಳಿಗೆ ಒಳಗಾಗುತ್ತೇವೆ ಅಂತ ಕುಡುಬಿಯರು ಾಗಿ ನಂಬುತ್ತಾರೆ. ಆದುದರಿಂದ ಎಂತಹ ಕಠಿಣ ಸಮಸ್ಯೆಗಳು ಎದುರಾದರೂ ಪ್ರತಿವರ್ಷ ಈ ಗುಮಟೆ ನೃತ್ಯವನ್ನು ಆಡುತ್ತಾರೆ.

ನೃತ್ಯದಲ್ಲಿ ದೈಹಿಕ ಚಲನವಲನಗಳು ಸೀಮಿತವಾದರೂ, ಗುಮಟೆ ನೃತ್ಯಕಾರ ಗುಮಟೆಯ ತಾಳಕ್ಕೆ ಸರಿಯಾಗಿ ಕುಣಿಯುತ್ತಾನೆ. ಇಲ್ಲಿ - ಹಾಡಿನ ಲಯ, ಗುಮಟೆಯ ತಾಳ ಮತ್ತು ನೃತ್ಯದ ಹೆಜ್ಜೆಗಾರಿಕೆಗಳು ಒಂದಕ್ಕೊಂದು ಪೂರಕವಾಗಿ ಒಂದು ರೀತಿಯ ಅವಿನಾಭಾವ ಸಂಬಂಧ ಸೃಷ್ಟಿಯಾಗುತ್ತದೆ. ಗುಮಟೆ ನೃತ್ಯ ನೇರ ಸಾಲುಕಟ್ಟಿ, ಎದುರೆದುರು ನಿಂತು, ವರ್ತುಲಾಕಾರದಲ್ಲಿ, ಏಕಪಾದದಲ್ಲಿ, ಒಂದೂವರೆ ಕಾಲಿನಲ್ಲಿ, ಗಿರ್ಗಿಟ್ಟಿಯಂತೆ, ಪ್ರದಕ್ಷಿಣ ಅಪ್ರದಕ್ಷಿಣವಾಗಿ ತಿರುಗಿ, ಕುಳಿತು ಎದ್ದು, ಒಬ್ಬನಿಗೊಬ್ಬ ಸುತ್ತು ಬಳಸಿ, ಮುಂದೆ ಹಾರಿ, ಹಿಂದಿ ತಿರುಗಿ, ಮೊಣಕಾಲೂರಿ,ತಲೆಯಲ್ಲಾಡಿಸಿ - ವಿವಿಧ ರೀತಿಗಳಲ್ಲಿ ಆಕರ್ಷಕವಾಗಿ ಕುಣಿಯುತ್ತಾರೆ. ಇದರೊಂದಿಗೆ ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣಗಳಿಂದ ಮಾತ್ರವಲ್ಲ, ಸಾಮಾಜಿಕ, ಇತಿಹಾಸಿಕ, ವಿನೋದಿತ, ವ್ಯಕ್ತಿಗೀತೆ, ವಿಧಿಗೀತೆ, ಶ್ರಮಗೀತೆ, ಶಿಶುಗೀತೆ, ಋತುಗಾನ, ಸಂಸ್ಕಾರಗೀತೆ, ಉತ್ಸವಗೀತೆ, ವಿವಾಹ ಗೀತೆ, ಲಾವಣಿಗೀತೆ, ಪ್ರೇಮಗೀತೆ, ವಿಳಾಪ ಗೀತೆಗಳಿಂದ ಕೂಡಿದ ಹಾಡುಗಳನ್ನು ಕೊಂಕಣಿಯಲ್ಲಿ ಹಾಡುತ್ತಾರೆ. ಈ ಹಾಡುಗಳಲ್ಲಿ ಶೃಂಗಾರ, ಪ್ರಣಯ, ಭಾವಾವೇಶ, ಸುಖ ದುಃಖ, ಆಚಾರ ವಿಚಾರ, ಕೋಪ ತಾಪ, ವ್ಯವಹಾರ, ಜಾನಪದ ಘಟನೆಗಳ ಸಂಗತಿಗಳಿಂದ ಕೂಡಿ ಲೋಕಾನುಭವದ ಕಣಜವೇ ಆಗಿರುತ್ತದೆ. ಗುಮಟೆ ನೃತ್ಯದ ಪ್ರಾರಂಭ, ವಿಸ್ತರಣೆ ಮತ್ತು ಮುಕ್ತಾಯಗಳಿಗೆ ನಿರ್ದಿಷ್ಟ ನಿಯಮಾವಳಿಗಳಿವೆ. ಹಾಡಿನ ಪ್ರಾರಂಭ, ಮಧ್ಯ ಅಥವಾ ಕೊನೆಯಲ್ಲಿ ಗಾ, ಗೇ, ಓ, ಯಾ, ಹೋ, ರೇ.. ಇತ್ಯಾದಿ ಉದ್ಗಾರದ ಧ್ವನಿ ತೆಗೆಯುವುದು ತಾಳಕ್ಕೆ, ನರ್ತನಕ್ಕೆ ಮತ್ತು ಹಾಡಿಗೆ ಪೂರಕವಾಗಲು ಹಾಗೂ ಈ ಶಬ್ದಗಳು ಹಾಡಿಗೆ, ಕಲಾಕಾರನಿಗೆ, ಒಟ್ಟಾರೆಯಾಗಿ ಕಲೆಗೆ ಗೌರವ ಸೂಚಕವಾಗಿ ಬಳಕೆಯಾಗುತ್ತವೆ. ಆಯಾಯ ಕುಣಿತಗಳಿಗೆ ಸರಿಯಾಗಿ ಹಾಡುಗಳ ವೇಗ, ತಾಳದ ಭಾರ ವ್ಯತ್ಯಾಸವಾಗುತ್ತದೆ. ಒಂದೇ ಹಾಡನ್ನು ಬೇರೆ ಬೇರೆ ಕುಣಿತಗಳಿಗೆ ಉಪಯೋಗ ಮಾಡಲು ಆಗುವುದಿಲ್ಲ. ಕುಡುಬಿಯರ ಈ ಗುಮಟೆ ವಾದನ, ನರ್ತನ ಮತ್ತು ಹಾಡುಗಳಲ್ಲಿ ಪ್ರಾದೇಶಿಕ ಪ್ರಾತಿನಿಧಿತ ವೈವಿಧ್ಯತೆಗಳಿರಬಹುದು. ಆದರೆ ಪ್ರಮುಖವಾಗಿ ಲಳಿತ್, ಉಡ್ಡೆಂತ್, ತೆಂಗೆಂ, ಥಾಗ್, ಸಮ್ಮಿಗಾಂ, ನೊಮೊನ್ - ಹೀಗೆ ವಿವಿಧ ಪ್ರಕಾರಗಳಿವೆ. ಇದರ ವಿವರ ಈ ಕೆಳಗಿನಂತೆ ಕೊಡಬಹುದು.

**ಲಳಿತ್ :**

ಗ ಯಮುಚೆಂ ನೋಮೊನ್ ಸೂರುಯಾ ವಂಶೇ । ರಾಮು ಜೊಲುಮೊಲೊ ಕೌಸಲ್ಯಾ ಕೊಸೇ

ಗ ನಾರೇ ಸುಮಿತ್ರೇಚಾ ಕೋಸೇ ದೇವು । ಲಗ್‌ಸಿಮೀನ್ ಜೊಲುಮೊಲಾ

ಗ ದೇವೇ ಕೈಕೇಚಾ ಊದರ,। ಭರೋತು ಶರತು ಬೊಲುಮೊಲ್ಯಾ

ಗ ರಾಯಾ ದೊಸೊರೊಂತಲೇ ಕುಳೇ । ಸೂಗು ವೀರ್ ಪುತುರು ಜೊಲುಮೊಲ್ಯಾ

ಗ ವರತಾಂ ಆಯಿಕೊನಿಯಾ....

ಗ ವರತಾಂ ಆಯಿಕೋನಿ ಸಗ್‌ಳೇಕಾ ರುಷಿ ದೇವುಗಾ ಆನಂದಾಲ್ಯಾ

ಗ ತೇತ್ತೀಸ್ ಕೊಟೇ ಓ.....

ಗ ತ್ತೇತ್ತೀಸ್ ಕೋಟೇರೆ ದೇವಾಗಣ । ರಾಮಾಲ್ಯಾ ಭರ್‌ಷಾಕ್ ಯಾಲ್ಯಾ

ಗ ರಾಮನ್ ಭಾವೆಂ ಓ.....

ಗ ರಾಮನ್ ಭಾವೆಂ ಪೂಜೆಲ್ಯಾ ವುಯಿರ್ ಭೇಟೊಂ ಯಾಲೆಗಾ ದೊಸೊರೊಂತಾ

ಗ ದಯಿತ್ಯಾ ವೊಧೇವೊಯಾ.....

ಗ ದಯಿತ್ಯಾಂ ವೊಧೇವೊಯಂ ಕಾರಣ್ । ಜೊಲುಮೊ ಯಾಲೊಬಾ ನಾರಾಯಣ್

ಈ ಹಾಡು 'ಲಳಿತ್' ಪ್ರಕಾರಕ್ಕೆ ಉದಾಹರಣೆ. 'ಲಳಿತ್' ನಲ್ಲಿ ಮುಖ್ಯ ಘಟನೆ ಸಲ್ಪಡುತ್ತದೆ. ಹಾಡು ನಿಧಾನಗತಿಯಲ್ಲಿ ಸಾಗಿ ತಾಳವೂ ನಿಧಾನವಾಗಿರುತ್ತದೆ. ಹಾಡಿಗೆ ಕುಣಿತವೂ ನಿಧಾನವೇ ಆಗಿರುತ್ತದೆ. ಮಧ್ಯೆ ಬರುವ ಅರ್ಧ ಚರಣಕ್ಕೆ 'ಕೀರ್ತನ್' ತ್ತಾರೆ. 'ಕೀರ್ತನ್' ವಾದನ ಆಗುವಾಗ ತಾಳದ ಪೆಟ್ಟುಗಳು 'ಲಳಿತ್' ಗಿಂತ ವೇಗವಾಗಿ ಲ್ಪಡುತ್ತವೆ ಮತ್ತು ವಾದನದ ಪೆಟ್ಟುಗಳು 'ಲಳಿತ್'ನ ತಾಳಕ್ಕಿಂತ ಭಿನ್ನವಾಗಿರುತ್ತವೆ. ಂದರ್ಭದ ಕುಣಿತವೂ ತಿರುಗುವಿಕೆಯ ರೂಪ ಪಡೆದು ವೇಗವಾದ ಚಲನೆಯೊಂದಿಗೆ ೖದು ಬಾರಿ ಬುಗರಿಯಂತೆ ತಿರುಗುತ್ತಾರೆ. ಹಾಡಿನಲ್ಲಿಯ ಘಟನೆಯನ್ನು ುವರಿಸಿಕೊಂಡು ಹೋಗಲು ಕಲ್ಪಿಸಿದ ಇದೊಂದು ಅವಕಾಶ. ಮೇಲಿನ 'ಲಳಿತ್' ಲ್ಲಿ ರಾಮಾಯಣದ, ದಶರಥ ಚಕ್ರವರ್ತಿಗೆ ಶ್ರೀ ರಾಮ ಸಹಿತ ನಾಲ್ಕು ಜನ ಮಕ್ಕಳು ವ ಸಂದರ್ಭದ್ದಾಗಿದೆ. ಈ ಘಟನೆಗೆ ಪೂರ್ಣವಿರಾಮ ನೀಡಬೇಕಾದರೆ 'ಉಡ್ತೆಂ' ನ್ನು ಹಾಡಬೇಕು. 'ಲಳಿತ್'ನಲ್ಲಿ ವಿವರಿಸಲ್ಪಟ್ಟ ಮುಖ್ಯ ಘಟನೆಯ ಉತ್ತರಾರ್ಧವೇ .

ಉಡ್ತೆಂ'ಯ ಚರಣಗಳು 'ಲಳಿತ್' ಗಿಂತ ಹೃಸ್ವವಾಗಿದ್ದು ಇದರ ಹಾಡುಗಾರಿಕೆ ಮತ್ತು ಕ್ಕೆ ಕಡಿಮೆ ಸಮಯ ಸಾಕಾಗುತ್ತದೆ. ಇದರ ತಾಳಗಳು ಹೃಸ್ವ ವೇಗದವಾಗಿದ್ದುದರಿಂದ ದ ಹೆಜ್ಜೆಗಳೂ ಚುರುಕುತನದ್ದಾಗಿರುತ್ತವೆ. 'ಲಳಿತ್' ನಲ್ಲಿ ಕಥೆಯ ಘಟನೆಗೆ ಹೆಚ್ಚಿನ ್ಯವಾದರೆ 'ಉಡ್ತೆಂ'ಯಲ್ಲಿ ಕುಣಿತಕ್ಕೆ ಪ್ರಾಮುಖ್ಯತೆ ಹೆಚ್ಚು. ಲಳಿತ್ ಹಾಗೂ ಉಡ್ತೆಂ - ಾ ಹಾಡುಗಳು ನೇರ ಸಾಲುಗಳಲ್ಲಿ ನಿಂತು ಕುಣಿಯುವ ಗುಮಟೆ ನೃತ್ಯದ ಪ್ರಕಾರಗಳು. ಾಣಿಸಿದ ಹಾಡು ಮೇಲೆ ವಿವರಿಸಿದ 'ಲಳಿತ್' ಹಾಡಿನ 'ಉಡ್ತೆಂ.'

ರಾಮು ಜೊಲುಮೊಲೊ ಅಯೋಧ್ಯೆಯ ನಗಾರಾ... (2)

ದಯಿತ್ಯಾಂ ವಧೇಯೇಚಾ ರಾಮು ಜೊಲುಮೋಯಾಲೊ...(2)

**ತೆಂಗೆಂ** : ಈಶ್ವರಾಚ್ಯಾ ಹಾತಿಂತಲೆಂ ಸಂಧಾನ್ ಸೂಟಲಾಂ । ಸಂಧಾನ್ ಸೂಟಲಾಂ

ಸಿರ್ ಭಾಯ್ರ್ ಸೇಸ್‌ಲಾಂಬಾ ಗನೇಸಾಚೆಂ । ಸ್ವಾಮಿ

ಸಿರ್ ಭಾಯ್ರ್ ಸ್ಥೇಸ್‌ಲಾಂ ಗನೇಸಾಚೆಂ

ಇದು ಎರಡೇ ಚರಣದ ಹಾಡಾದರೂ ಸ್ವಲ್ಪದರಲ್ಲೆ ಒಂದು ಘಟನೆಯನ್ನು ವಿವರಿಸುತ್ತದೆ. ಸಂದರ್ಭ ಶಿವಪುರಾಣದ್ದು. ಶಿವನು ಗೌರೀಪುತ್ರ ವಿನಾಯಕನ ಶಿರಚ್ಛೇದ ಮಾಡಿದ ಸಂದರ್ಭದ್ದು. 'ತೆಂಗೆಂ' ಹಾಡು 'ಉದ್ತೆಂ' ಗಿಂತಲೂ ವೇಗಗತಿಯಲ್ಲಿ ಹಾಡುವ ಹಾಡು. ತಾಳಕ್ಕೆ ತಕ್ಕ ಕುಣಿತ ಮತ್ತು ತಿರುಗುವ ಸುತ್ತುವಿಕೆಗಳು ಹೆಚ್ಚು ಮತ್ತು ತೀವ್ರ ವೇಗಗತಿಗಳನ್ನು ಹೊಂದಿರುತ್ತದೆ. ಈ ಪ್ರಕಾರದಲ್ಲೂ ಕುಣಿತಕ್ಕೇ ಹೆಚ್ಚಿನ ಪ್ರಾಮುಖ್ಯತೆಯಿದ್ದು ನೇರ ಸಾಲುಕಟ್ಟಿ ಕುಣಿಯುವಂಥಾದ್ದಾಗಿದೆ. ನೃತ್ಯದ ನೋಟ ಲಳಿತ್ ಮತ್ತು ಉದ್ತೆಂ ಗಳಿಗಿಂತ ಆಕರ್ಷಕವಾಗಿರುತ್ತದೆ.

**ಥಾಗ್ :**

ದೇವುಳಾ ಭೊವುಂತ್ಯೇ ಪ್ರದಕ್ಷಿಣಂ ಯಾತೇ... (2)

ಕಳ್ಯಾ ನೀಳ್ಯಾ ವುಸ್ತುರಾಂಚೊ ವೊಳ್‌ಳ್ಯೋ ವಾತೀ... (2)

ಥಳಾಚ್ಯಾ ದೇವಾಂಚ್ಯಾ ಫುಡಾಂ ಜೊಳುತ್ಯೋ ವಾತೀ... (2)

ಈ ಹಾಡು, ತಾಳ ಮತ್ತು ಕುಣಿತ, ಮೇಲೆ ವಿವರಿಸಿದ 'ಉದ್ತೆಂ' ಯದ್ದೇ ಇನ್ನೊಂದು ರೂಪ. ಆದರೆ, ಎಲ್ಲಾ ಸ್ಥಳಗಳಲ್ಲಿ ಹಾಗೂ ಸಂದರ್ಭಗಳಲ್ಲಿ ಈ ಹಾಡನ್ನು ಹಾಡುವಂತಿಲ್ಲ. ನಿಶ್ಚಿತ ಕೆಲವು ಸ್ಥಳಗಳಲ್ಲಿ, ದೇವಸ್ಥಾನ - ದೈವಸ್ಥಾನಗಳ ಮುಂದುಗಡೆ, 'ಮಾಂಡ್'ನಲ್ಲಿ ದೇವರನ್ನು ಸ್ತುತಿಸುವಾಗ ಮಾತ್ರ ಹಾಡಬೇಕಾಗದುದು. 'ಗುಮಟೆ' ಯ ಉಪಯೋಗದ ಪ್ರಕಾರಗಳಲ್ಲಿ 'ಥಾಗ್' ಆಧ್ಯಾತ್ಮಿಕ ಭಾವನೆಯ ಲೇಪನವನ್ನು ಪಡೆದಂತಹ ಒಂದು ಪ್ರಕಾರ.

**ಸಮ್ಡಿಗಾಂ :**

ಯಾದಿಂರೆ ನೊಮೊನ್ ಯೆಂತ್‌ರಂಗಾ, । ನಾಮಾಗೆಚ್ಯಾ ದೇವಾಂದೊ (2)

ಜಳ್‌ಮೆಳೆ ವಯ್ರ್ ಯಾಲೊ ಸೂರ್ಯ । ದಾಲೊ ರೊಂಗು ಮಾಳಾರೇ (2)

ಸಮ್ಜಿಗಾಂ ವ್ಹಾಜವ್ನ್ ದಯಿತ್ಯಾಂ ಮಾರೇ । ಯಾದಿಂರೆ ನೊಮನ್ ಗನೇಸಾ (2)

ಗನೇಸಾಚ್ಯೊ ದಾಲ್ಯಾ ರಾನಿಯೊ । ಶಿಗ್‌ಮೊ ಖೆಳೊಂ ಮಾಟ್ವಾ ಥಳೇ (2)

ಸೂಗಿ ಆಯೊ ಸೂಗಿ ಬಾಯೊ, । ಸೇಸ್ ಭೊರುಲ್ಯೊ ಪಾಂಯ್‌ಂದಾನೀ (2)

ಈ ಹಾಡು ಗಣಪತಿಯನ್ನು ಸ್ತುತಿಸಿ ಹಾಡುವ ಹಾಡು. ಸಾಮಾನ್ಯವಾಗಿ ಒಂದು ತಲ್ಲಿ ಗುಮಟೆ ನೃತ್ಯವನ್ನು ಅಂತ್ಯಗೊಳಿಸಿ, ಕೋಲಾಟ ಪ್ರಾರಂಭಕ್ಕೆ ಮುಂಚಿತವಾಗಿ ತ್ತಾರೆ. ಗುಮಟೆ ನೃತ್ಯಕಾರರು ಮಧ್ಯೆ ಒಂದು ತೆಂಗಿನಕಾಯಿ ಅಥವಾ ದೀಪವಿಟ್ಟು, ತನ್ನ 'ಘುಡೊ' (ಜೊತೆ ನೃತ್ಯಕಾರ) ಸಂಗಾತಿಯೊಂದಿಗೆ ನಿಲ್ಲುತ್ತಾರೆ. ಹೀಗೆ ಆಡುವಾಗ ಲಾಕಾರದಲ್ಲಿ ನಿಲ್ಲುತ್ತಾರೆ. ಪ್ರಾರಂಭದಲ್ಲಿ ಕೈ ಮುಗಿದು, ದೇವರನ್ನು ನೆನೆದು ಶವಾಗಿ ಹಾಡಲು ಮತ್ತು ಹೆಜ್ಜೆ ಹಾಕಲು ಪ್ರಾರಂಭಿಸುತ್ತಾರೆ. ನಿಧಾನಗತಿಯಲ್ಲಿ ಹಾಡು ದ ನಂತರ ಉತ್ತರಾರ್ಧದ ಎರಡು ಚರಣಗಳನ್ನು ಮಾತ್ರಾ ಹಾಡುತ್ತಾ ಪುನಃ ಎತ್ತುಗಡೆ ತ್ತಾ, ತನ್ನ 'ಘುಡೊ' ಸಂಗಾತಿಯನ್ನು ಹಿಂದಕ್ಕೆ ಬಿಟ್ಟುಕೊಂಡು ಆಡುತ್ತಾ ಆಡುತ್ತಾ ದ ರೀತಿ, ಹಾಡಿನ ವೇಗ ತೀವ್ರಗತಿಯನ್ನು ಪಡೆಯುತ್ತದೆ. ಭಕ್ತಿಗೆ ಹೆಚ್ಚಿನ ನ್ಯತೆಯಿರುವ ಈ ಪ್ರಕಾರದಲ್ಲಿ ಕಲಾಕಾರರು ತೆಂಗಿನಕಾಯಿ, ದೀಪ ಹಾಗೂ ಹಾಡು ಳಲ್ಲಿ ದೈವೀಕ ಸಾಕ್ಷಾತ್ಕಾರದ ಅನುಭವವನ್ನು ಹೊಂದುತ್ತಾರೆ.

ೂನ್ :

ಗ ಪ್ರಥಮ್ ನೊಮೊನ್ ಭೂಮಿಗೇ । ಮಾಯೇ, । ತೂಝು ಧರಿನ್ ಚರಣ್ ಪಾಯೇ

ಗ ಶಿಗ್‌ಮೊ ಮಾಸ್ ಓ....

ಗ ಶಿಗ್‌ಮೊ ಮಾಸ್ ಆನೊಂದು ದಾಲಾ, । ಸೋಭಾಗೇ ಖೇಳುರೆ ಖೇಳು ದೇಂವಾಲಾ

ಗ ಖೇಳೇ ಯಾಲೇ ಓ..

ಗ ಖೇಳೇಯಾಲೇ ತೂಮಚಾ ಸಯಾಂ, । ಖೇಳೇಯಾಂ ನಿರೂಪ್ ಯೇಕ್ ದಿಯಾಂ

ಗ ಖೇಳೆಯಾಂ ನಿರೂಪ್ ಯೇಕ್ ದಿಯಾಂ । ಆನೊಂದು ಶಿಗ್‌ಮೊ ಖೇಳ್‌ಯಾಂ

ಗುಮಟೆ ನೃತ್ಯ ಪ್ರಾರಂಭ ಮಾಡುವ ಮೊದಲು 'ಲಳಿತ್' ರೂಪದಲ್ಲಿರುವ ಈ ಹಾಡನ್ನು ಲಾಗುತ್ತದೆ. ಪ್ರಕೃತಿಯನ್ನೆ ಆರಾಧಿಸುವ ಕುಡುಬಿಯರು ಈ ಹಾಡಿನ ಮೂಲಕ ೕವಿಯನ್ನು ಸ್ಮರಿಸಿ, ವಂದಿಸಿ, ಹಾಡಿ ಹೊಗಳುತ್ತಾರೆ. ತಾನೇ ಕಲಿತು ಅಭ್ಯಸಿಸಿ ರೂಢಿ ಕೊಂಡ ಕಲೆಯಾದರೂ ಇದಕ್ಕೆ ಮಾನವನ ಅಸ್ತಿತ್ವವನ್ನು ನಿಯಂತ್ರಿಸುವ ಪ್ರಕೃತಿಯ ತ್ತ ಶಕ್ತಿಯೇ ಕಾರಣ ಅಂತ ನಂಬುವ ಕುಡುಬಿಯರು ಭೂಮಿ ತಾಯಿಗೆ ಈ ಮೂಲಕ ು ಗೌರವ ಸಲ್ಲಿಸುತ್ತಾರೆ.

ಮೇಲೆ ವಿವರಿಸಿದ ಗುಮಟೆ ಹಾಡುಗಳ ನೃತ್ಯಗಳ ಪ್ರಕಾರಗಳು ಮಂಗಳೂರು, ಕಾರ್ಕಳ ಬಂಟ್ವಾಳ ಪರಿಸರದಲ್ಲಿ ಕಂಡುಬರುವ ಕೆಲವು ಉದಾಹರಣೆಗಳು ಮಾತ್ರಾ. ಬೇರೆ ಸಂದರ್ಭಗಳಲ್ಲಿ, ಪ್ರದೇಶಗಳಲ್ಲಿ, ವಿವಿಧ ವಾಡೆಗಳಲ್ಲಿ, ಹಾಡು ಹಾಗೂ ಕುಣಿತಗಳ

ವೈವಿಧ್ಯತೆಗಳಿವೆ. ಪ್ರತಿಯೊಂದು ಹಾಡಿನ ಭಾವಾವೇಶದ ಪ್ರಕಾರ, ಹಾಡುಗಳಲ್ಲಿ ವ್ಯಕ್ತವಾಗುವ ಘಟನಾವಳಿಗಳಿಗೆ ಸರಿಯಾಗಿ ಗುಮಟೆಯ ತಾಳ ಹಾಗೂ ನೃತ್ಯಗಾರಿಕೆಯ ಸೊಬಗು ಕೂಡಾ ಬದಲಾಗುತ್ತದೆ.

**ಗುಮಟೆ ನೃತ್ಯ ಆಡುವ ಕೊಡಿಯಾಲ್ ಕುಡುಬಿ ವಾಡೆಗಳು :**

ಮಂಗಳೂರು ತಾಲೂಕು : 1. ಪರಿಯೆಗಳ್ (ಹರೇಕಳ =ಕಂಡ್ಲ) 2. ಕುತ್ತಾರು 3. ಕೊಣಾಜೆ (ಬೊಂಳ್ಬ) 4. ಕಾನಡ್ಕ 5. ಬಜ್ಪೆ ಸ್ವಾಮಿಲಪದವು 6. ಪೆರ್ಮುದೆ 7. ಮೂಡುಪೆರಾರ್ 8. ಕೊಂಪದವು 9. ಮುಚ್ಚೂರು ಕಾನಾ 10. ಕನ್ನೊರಿ A ಎಡಪದವು 11. ಕನ್ನೋರಿ B. ಎಡಪದವು 12. ಮಿಜಾರು ಕಿಂಡೇಲು 13. ಕಿಂಡೇಲು ಸಮಾಜ ಮಂದಿರ 14. ಕಿಂಡೇಲು ಅಂಚೆಕಟ್ಟೆ 15. ಪಯ್ಯರಬೆಟ್ಟು

ಕಾರ್ಕಳ ತಾಲೂಕು : 1. ಪೂಮಾವರ 2. ವಂಟಿಮಾರ್ (ಅಶ್ವತ್ ಪುರ) 3. ಮೈಂದೇರಿ ಮರಕಡ 4. ಪುತ್ತಿಗೆ ಪದವು 5. ಪುತ್ತಿಗೆ ಬೀಡು (ಶಕ್ತಿಪುರ) 6.ಕಡಂದಲೆ

ಬಂಟ್ವಾಳ ತಾಲೂಕು : ಸಿದ್ಧಕಟ್ಟೆ

ಉಡುಪಿ ತಾಲೂಕು : 1. ಸೂರಾಲು (ಕೆಂಜೂರು ಬಾಳೆಗುಂಡಿ) 2. ಬಾರಾಡಿ (ಕೊಂಡೆಜಡ್ಡು) 3. ಮುಳ್ಕಾಡ (ಕುಚ್ಚೂರು) 4. ಬುಕ್ಕಿಗದ್ದೆ 5.ಹನಿಯಾಲು (ಪೆರ್ಡೂರು) 6. ಕಡಂಬಳೆ ಇರ್ವತ್ತೂರು (ಪೆರ್ಡೂರು) 7. ದೇವಸ (ಪೆರ್ಡೂರು) 8. ಶಿವಪುರ (ಹೆಬ್ರಿ)

**ಗುಮಟೆ ನೃತ್ಯ ಆಡುವ ಗೊಂಯ್ಕಾರ್ ಕುಡುಬಿ ವಾಡೆಗಳು :**

ಉಡುಪಿತಾಲೂಕು 1. ಕ್ಯಾದಗೆರೆ, 2. ನಡಿಗೇರಿ 3. ಕೇಶವಾಪುರ 4. ಹೆಗ್ಗುಂಜೆ ( ಮಂದರ್ತಿ) 5. ಗೋಳಿಅಂಗಡಿ 6. ಹೀಲಿಯಾಣ 7. ಒಳಬಯ್ಲ್ 8. ನಿಂಜೂರುಬೆಟ್ಟು 9. ಕೋಟಂಬಯ್ಲ್ 10. ಯಡ್ತಾಡಿ 11. ನಂಚಾರು (ನಾಲ್ಕೂರು) 12. ಕಜಕೆ 13. ಕಂಡಿಕೆ (ಮಂದರ್ತಿ) 14. ಕಲ್ಬುರ್ಗಿ 15. ಬೀಳಂಜೆ (ಬೀದಿಬೆಟ್ಟು) 16. ಕೂಡ್ಲಿ

ಕುಡುಬಿ ಜಾನಪದ ಕಲಾವೇದಿಕೆ (ರಿ) ಎಡಪದವು : ಕುಡುಬಿ ಸಮುದಾಯದಲ್ಲಿ ಮೇಲೆ ವಿವರಿಸಿದಂತೆ ನಿಶ್ಚಿತ ಸಂದರ್ಭಗಳನ್ನು ಹೊರತು ಪಡಿಸಿದರೆ, ಇತರ ಸಂದರ್ಭ ಗುಮಟೆ ಪ್ರಕಾರವನ್ನು ಪ್ರಸ್ತುತ ಪಡಿಸುವುದಕ್ಕೆ ಸಮಾಜದ ರೀತಿ ರಿವಾಜುಗಳ ಕಟ್ಟುನಿಟ್ಟಿನ ಪಾಲನೆಯಿಂದಾಗಿ ಅವಕಾಶವಿಲ್ಲ. ಇಂತಹ ಅಪರೂಪದ ವಿಶಿಷ್ಟ ಕಲೆಯನ್ನು ಹೊರಗಿನ ಸಮಾಜಕ್ಕೆ ಪರಿಚಯಿಸಿ ಕುಡುಬಿಯರ ಅಸ್ತಿತ್ವವನ್ನು ಪ್ರಸಾರ ಮತ್ತು ಪ್ರಚಾರ ಮಾಡಿದ ಕೀರ್ತಿ ಮಂಗಳೂರು ತಾಲೂಕಿನ ಎಡಪದವು ಗ್ರಾಮದ 'ಕುಡುಬಿ' ಜಾನಪದ ಕಲಾವೇದಿಕೆ' ಇವರದ್ದಾಗಿದೆ.

ಕುಡುಬಿಯರ ಪೈಕಿ ಎಡಪದವಿನ ಅಭಿಜಾತ ಗುಮಟೆ ಕಲಾಕಾರ ಗೋಪಾಲ ಗೌಡರ ತ್ವದಲ್ಲಿ 1973-74 ರಲ್ಲಿ ಒಂದು ಕಲಾತಂಡ ರಚಿತವಾಯಿತು. ಕಳೆದ ಮೂರು ಗಳಲ್ಲಿ ಈ ತಂಡವು ದೇಶದ ಉದ್ದಗಲ ರಾಜ್ಯಹಾಗೂ ರಾಷ್ಟ್ರಮಟ್ಟದ ಪ್ರತಿಷ್ಠಿತ ಕೆಗಳಲ್ಲಿ ಇನ್ನೂರಕ್ಕೂ ಮಿಕ್ಕು ಪ್ರದರ್ಶಗಳನ್ನು ಸಾದರಪಡಿಸಿದ್ದಾರೆ. ಆಕಾಶವಾಣಿ, ದರ್ಶನದಂತಹ ಮಾಧ್ಯಮಗಳಲ್ಲಿ ಇವರ ಕಲೆ ಪ್ರಸಾರವಾಗಿದೆ. ಕೇಂದ್ರ ಸರಕಾರದ ಸೋದ್ಯಮ ಮತ್ತು ಸಂಸ್ಕೃತಿ ಇಲಾಖೆಯಿಂದ ಇವರಲ್ಲೊಬ್ಬ ಕಲಾವಿದನಿಗೆ ವಿದ್ಯಾರ್ಥಿ ನ (ಸ್ಕಾಲರ್ ಶಿಪ್) ಸಿಕ್ಕಿದೆ. ಗೋಪಾಲ ಗೌಡರ ಸಂಗ್ರಹದ 'ಗುಮ್ಟಾಂ ಆನಿ ತೋಣಿಯಾಂ ಂ' ಎಂಬ ಗುಮಟೆ ಮತ್ತು ಕೋಲಾಟ'ದ ಹಾಡುಗಳನ್ನು ಕರ್ನಾಟಕ ಕೊಂಕಣಿ ಸಾಹಿತ್ಯ ಡೆಮಿಯು ಪ್ರಕಟಿಸಿ ಅವರಿಗೆ 2002ನೇ ವರ್ಷದ ಅಕಾಡೆಮಿಯ 'ಗೌರವ “ಜಾನಪದ ತ್ತ” ನೀಡಿ ಗೌರವಿಸಿರುತ್ತಾರೆ. ಕಲಾವೇದಿಕೆಯ ಕಲಾವಿದರು ಅಕಾಡೆಮಿಯ ಸದಸ್ಯರಾಗಿ ಾ ನೇಮಕವಾಗಿದ್ದಾರೆ. ಕುಡುಬಿಯರ ಬಗ್ಗೆ ಸಂಶೋಧನೆ, ಅಧ್ಯಯನ ನಡೆಸುವವರಿಗೆ ಸಮ್ಮೂಲ ಸಂಸ್ಥೆಯಾಗಿ ಮಾಹಿತಿ ನೀಡಿದ ಸಂದರ್ಭಗಳಿವೆ. ಪ್ರಸ್ತುತ ಕುಡುಬಿ ವಾಡೆಗಳನ್ನು ರತು ಪಡಿಸಿದರೆ ಸ್ವತಂತ್ರ ರೀತಿಯಲ್ಲಿ ನೃತ್ಯ ಪ್ರದರ್ಶನವನ್ನು ಪ್ರದೇಶ, ಕಾಲಗಳ ಂಧವಿಲ್ಲದೆ ನೀಡುತ್ತಿರುವ ನೋಂದಾಯಿತ ತಂಡ ಕುಡುಬಿ ಜಾನಪದ ಕಲಾವೇದಿಕೆ ತ್ರ.

**ಂಕಣಿ ಕ್ರಿಶ್ಚಿಯನ್ ಸಮುದಾಯದಲ್ಲಿ ಗುಮಟೆ :**

ಿನ ಕ್ರಿಶ್ಚಿಯನ್ ಸಮಾಜದಲ್ಲಿ ಸುಗ್ಗಿಯ ಕಾಲದಲ್ಲಿ ಗದ್ದೆತೋಟಗಳ ಕೆಲಸಗಳನ್ನು ಸಿ ಆದ ಮೇಲೆ ದೈಹಿಕ ಶ್ರಮದ ವಿಶ್ರಾಂತಿ ಸಮಯದಲ್ಲಿ ಶ್ರಮ ಪರಿಹಾರ್ಥವಾಗಿ ಟ್ ಬಾರಿಸುವುದು ರೂಢಿಯಾಗಿತ್ತು. ತಂತಮ್ಮ ದೈನಂದಿನ ಕಷ್ಟದ ಕೆಲಸಗಳು ಮುಗಿದಂತೆ ಯೆದುರಿನ ಅಂಗಳದಲ್ಲಿ ಕುಳಿತು ಗುಮಟೆ ಬಾರಿಸಿ ಹಾಡುತ್ತಿದ್ದರು. ವಿವಾಹ, ವಿವಾಹದ ಔತಣ, ಹಬ್ಬ ಹುಣ್ಣಿಮೆ ದಿವಸಗಳಲ್ಲಿ ಅಲ್ಲದೆ ತಂತಮ್ಮ ಮನೆಗಳಲ್ಲಿ ಜರಗುವ ಯೊಂದು ಶುಭಕಾರ್ಯಗಳ ಸಂದರ್ಭ ಗುಮಟೆ ಬಾರಿಸುತ್ತಿದ್ದರು. ನಿರ್ದಿಷ್ಟ ದಿನ, ಷ್ಟ ಜಾಗದಲ್ಲಿ ಗುಮಟೆ ಮೇಳ ಸೇರುತ್ತದೆ ಅಂತ ತಿಳಿದ ತಕ್ಷಣ ತನ್ನ ಗುಮಟೆ ಕೊಂಡು, ಆಮಂತ್ರಣವಿಲ್ಲದಿದ್ದರೂ ಅಲ್ಲಿಗೆ ತಲುಪುತ್ತಿದ್ದರು ಮತ್ತು ಅಲ್ಲಿ ಅವರಿಗೆ ವದೊಂದಿಗೆ ಸ್ವಾಗತವೂ ಇತ್ತು. ಮದುಮಗಳ ಮದುವೆ ಚಪ್ಪರದಲ್ಲಿ 'ರೋಸ್' (ರೋಸ್ ಂಗಿನಹಾಲು = An act symboling purification of the bride and egroom prior to marriage) ಪೂಸುವ ರಾತ್ರಿ ಗುಮಟೆ ಬಾರಿಸಲ್ಪಡುತ್ತಿದ್ದವು. ಗೆ ತಯಾರಿ ಮಾಡುವಾಗ, ತರಕಾರಿ ಹಚ್ಚುವಾಗ, 'ಸನ್ನಾಂ' (ಇಡ್ಲಿಯಂಥಾ )ಬೇಯಿಸುವಾಗ, ಹಂದಿಯ ಮಾಂಸ ಮಾಡುವಾಗ ಇಡೀ ರಾತ್ರಿ ಗುಮಟೆ ಸುತ್ತಿದ್ದುದರಿಂದ ನಿದ್ರೆಯಿಂದ ತೂಕಡಿಸುತ್ತಿರಲಿಲ್ಲ. ಗುಮಟೆಯ ನಾದಕ್ಕೆ, ಮತ್ತು ಎತ್ತರದ

ಸ್ವರದಲ್ಲಿ ಹಾಡುಗಾರಿಕೆಗೆ ಪುರುಷ ಮಹಿಳೆಯರು, ಯುವಕ - ಯುವತಿಯರು, ಮಕ್ಕಳು - ಹಿರಿಯರು ಮುಂತಾಗಿ ಎಲ್ಲರೂ ರಾತ್ರಿ ಇಡೀ ಕುಣಿಯುತ್ತಿದ್ದರು.

ಶಿಕಾರಿ ಮಾಡಿ 'ಬೆರು ' (ಕಳ್ಳುಬೆಕ್ಕು) ಅಥವಾ ಕಡವೆ ಹೊಡೆದು ಬಂದ ದಿವಸ ಒಂದು ಮನೆಯಿಂದ ಗುಮಟೆಯ ಶಬ್ದ ಕೇಳಿತೂಂದ್ರೆ ನೆರೆಕರೆಯವರೆಲ್ಲಾ ಅಲ್ಲಿ ಸೇರುತ್ತಿದ್ದರು. ಇಡೀ ರಾತ್ರಿ ಹಳ್ಳಿಯ ಯುವಕರು, ಹಿರಿಯರಿಂದ ಕಲಿಯುವಾಗ ತರತರದ ಹಾಡುಗಳನ್ನು ಹಾಡುತ್ತಿದ್ದರು. ಈ ಹಾಡುಗಳಲ್ಲಿ ಹೆಚ್ಚಾಗಿ ಜಾನಪದ ಕಥೆಗಳ ವಿವರಣೆಯಿರುತ್ತಿತ್ತು. ಈ ಹಾಡುಗಳೊಂದಿಗೆ 'ಕಂತಿಗೊ' ಎಂಬ ಧಾರ್ಮಿಕ ಹಾಡುಗಳೂ ಹಾಡಲ್ಪಡುತ್ತಿದ್ದವು. ಬೇರೆ ಬೇರೆ ರೀತಿಯ ತಮಾಶೆಯ, ವಿನೋದಾವಳಿಗಳ ಹಾಡುಗಳು ಇರುತ್ತಿದ್ದವು. ಈ ಕಥನಕಾವ್ಯಗಳಲ್ಲಿ ದುರಿತ್ ರಾಯನ ಕಥೆ, ಕದಂಬಾ ಕುವರಿಯ ಕಥೆ, ಅತ್ತಿಯ ಕಥೆ, ಅಭಿಂಗಾ ಕುವರನ ಕಥೆ, ಗೌಡನ ಕಥೆ, ಇಸ್ರೇಲ್ ರಾಜನ ಕತೆ, ಅಬ್ರಾಂವ್‌ನ ಕಥೆ, ಮೇರಿಯ ಜನನದ ಕಥೆ, ಹೀಗೆ ಅನೇಕ ಕಥೆಗಳು ಉಪಲಬ್ಧವಿವೆ.

ಕ್ರಿಶ್ಚಿಯನ್ನರ ಗುಮಟೆ ಪದಗಳನ್ನು ಮೂರು ವಿಭಾಗ ಮಾಡಬಹುದು. ಪ್ರಥಮವಾಗಿ ಸಾಮಾಜಿಕ ಹಾಡುಗಳು. ಸಮಾಜದಲ್ಲಿನ ರೀತಿ ರಿವಾಜುಗಳು, ವಿಧಿ ನಿಷೇಧಗಳಂತಹ ಸಾಮಾಜಿಕ ಸಂಗತಿಗಳನ್ನು ಆಧರಿಸಿದ ಪದಗಳು. ಸೋಭಿನಾಚ್ಯಾ ಮಾಂವಾಚೆಂ ಕಾರ್ಭಾರ್ (ಸೊಭಿನಾಳ ಮಾವನ ಕಾರುಬಾರು), ಮಾಂಯ್ ಸುನೆ ಮದ್ಲೆಂ ಝುಗ್ಡೆಂ (ಅತ್ತೆ - ಸೊಸೆಯರ ನಡುವಿನ ಜಗಳ), ಕಾಜಾರ್ ಕರ್ನ್ ದಿಲ್ಲ್ಯಾ ಚೆಡ್ವಾನ್ ಅಪ್ಲ್ಯಾ ಕುಳಾರಾವೆಚೆಂ (ಮದುವೆ ಮಾಡಿಕೊಟ್ಟ ಹೆಣ್ಣು ತನ್ನ ತವರಿಗೆ ಹೋಗುವುದು), ಹೊಕ್ಲೆಚ್ಯಾ ಭಾವಾಂನಿ ಹೊಕ್ಲೆಕ್ ರೆಸ್ಪೆರಾಕ್ ಹಾಡ್ಚೆಂ (ವಧುವನ್ನು ಸಹೋದರರು ವಿವಾಹಕ್ಕೆ ಕರೆತರುವುದು), ತೆಂಡ್ಲ್ಯಾಚೆಂ ಕಾಜಾರ್ (ತೊಂಡೆಯ ಮದುವೆ), ಉಂದಿರ್ ಮಾಮ್ (ಇಲಿಮಾವ), ಅಡ್ಕುಲೊ - ಬುಡ್ಕುಲೊ, ಖಡ್ಪಾನ್ ಖಡಾಪ್ ಭೊಂವ್‌ರೆ ಪಾಲ್ಗಾ, ಭೊವ್‌ಚ್ ಫಾಂತ್ಯಾರ್ ಉಠಯಾಂ (ಬೆಳ್ಳಂಬೆಳಗ್ಗೆ ಏಳುವ), ಕಾಜಾರಾಜೊ ಮಾಟೊವ್ (ಮದುವೆಯ ಚಪ್ಪರ) ಇಂತಹ ವಿಷಯಗಳ ಮೇಲೆ ಈ ಹಾಡುಗಳು ರಚಿತವಾದವುಗಳು.

ದ್ವಿತೀಯವಾಗಿ ಧಾರ್ಮಿಕ ಪದಗಳು. ಕೆಲವು ಧಾರ್ಮಿಕ ಘಟನಾವಳಿಗಳ ಉಲ್ಲೇಖ ಮಾಡಿ, ತತ್ಕಾಲೀನ ಸಮಾಜದ ರೀತಿ ರಿವಾಜುಗಳಿಗೆ ಅನುಗುಣವಾಗಿ ಕೆಲವು ಬದಲಾವಣೆ ಮಾಡಿ ಹಾಡುಗಳನ್ನು ರಚಿಸಲಾಗುತ್ತಿತ್ತು. ದಾವೀದ್ ರಾಯಾಚಿ ಕಥಾ, (ದಾವೀದ ರಾಜನ ಕಥೆ), ಬುದ್ವಂತ್ ಸಾಲ್ಮಾಂವ್ ರಾಯಾಚಿ ಕಥಾ (ಬುದ್ಧಿವಂತ ಸಾಲ್ಮಾಂವ್ ರಾಜನ ಕಥೆ), ಜೆಜುಜೊ ಜಲ್ಮ್ (ಯೇಸುವಿನ ಜನನ), ಮರಿಯೆಚೆಂ ಕಾಜಾರ್ (ಮೇರಿಯ ವಿವಾಹ), ಜೆಜು ಸತೆವಂತ್ (ಯೇಸು ಸತ್ಯವಂತ), ಸಾಂ ಫ್ರಾನ್ಸಿಸ್ ಸಾವೆರ್ (ಸಂತ ಫ್ರಾನ್ಸಿಸ್ ಸಾವೆರಾ), ಸಾಂ ಲೊರೆಸ್ ಭಕ್ತ್ (ಸಂತ ಲೊರೆನ್ಸ್ ಭಕ್ತ), ಸಾತ್ ಸಾಕ್ರಾಮೆಂತ್ (ಏಳುಸಂಸ್ಕಾರಗಳು),

ರೆಚ್ಯಾ ವೆಳಿಂ, ಗೊಂಯ್ ಸಾಂಡುನ್ ಆಯ್ಲಿ ಮಾಯ್, ಜೊಕಿ ಸಂತಾನಾಲ್ಯೆ ಘರಿ, ಸ್ತ್ಯಾಂಚಿ ಶಿರ್ ಇಂತಹ ವಿಷಯಗಳಿರುತ್ತಿದ್ದವು

ತೃತೀಯವಾಗಿ ಚಾರಿತ್ರಿಕ ಘಟನೆಗಳ ಹಾಡುಗಳು. ಟಿಪ್ಪು ಸರದಾರ, ಶತ್ರುಗಳ ಉಪಟಳ, ರುನ್ನರ ಧೈರ್ಯ ಸಾಹಸಗಳ ವಿಷಯಗಳಿಂದ ಈ ಹಾಡುಗಳು ತುಂಬಿರುತ್ತಿದ್ದವು.

ವರ್ತುಲಾಕಾರದಲ್ಲಿ ಕುಳಿತು ನಾಲ್ಕೈದು ಜನರು ಗುಮಟೆ ಬಾರಿಸಿ ಹಾಡುವಾಗ ಸವರು ಉಲ್ಲಾಸಭರಿತರಾಗಿ ಚಪ್ಪಾಳೆ ತಟ್ಟುತ್ತಾ ಭಾಗವಹಿಸುತ್ತಿದ್ದರು. ತಾಸು ಗಟ್ಟಲೆ ಚ್ಚ ಸ್ವರದಲ್ಲಿ ಪದಗಳನ್ನು ಹಾಡುತ್ತಾ, ಗುಮಟೆ ಬಾರಿಸುತ್ತಾ ಆಗುವ ಶ್ರಮ ಪರಿಹಾರಕ್ಕೆ ಕುಡಿಯುವುದು ಸಾಮಾನ್ಯವಾಗಿತ್ತು. ಪ್ರತಿಯೊಂದು ಚರಣವನ್ನು ಎರಡೆರಡು ಬಾರಿ ಲಾಗುತ್ತಿತ್ತು. ಮೂರು ಅಥವಾ ನಾಲ್ಕು ಚರಣಗಳ ಬಳಿಕ ಹಾಡಿನ ಸ್ವರ ತಾರಕಕ್ಕೇರುತ್ತಿತ್ತು. ಂದರ್ಭ ಗುಮಟೆಗಳ ನಾದವೂ ಉಚ್ಚ ಸ್ಥಾಯಿಗೇರುತ್ತಿತ್ತು. ಒಂದೊಂದು ಘಟನೆಯ ು ಹಾಡಲು ಇಡೀ ರಾತ್ರಿ ವ್ಯಯಿಸುತ್ತಿದ್ದರು ಅನ್ನುವಾಗ ಸಾಹಿತ್ಯದ ವಿಶಾಲತೆ, ಕಾಲ್ಪನಿಕ ನೆಗಳು ತುಂಬಿರುವ ಈ ಹಾಡುಗಳಲ್ಲಿ ಪೂರ್ವಜರ ಬುದ್ಧಿವಂತಿಕೆ, ಜಾಣ್ಮೆಗಳು ವಾಗುತ್ತವೆ. ಗುಮಟೆ ಪದಗಳು ಪೂರ್ವಿಕರು ಅವರ ಆಳವಾದ ಜ್ಞಾನದಿಂದ ತಯಾರು ಿದ ಪಕ್ವಾನ್ನವೇ ಆಗಿವೆ. ಕೊಂಕಣಿ ಸಂಸ್ಕೃತಿಯ ಸ್ವಾದ, ಅಲಂಕಾರ, ವಿವಿಧತೆಗಳಿಂದ ತುಗಳ ಶೃಂಗಾರ ಮುಂತಾದ ವೈಶಿಷ್ಟ್ಯಗಳಿಂದ ಈ ಹಾಡುಗಳು ತುಳುಕುತ್ತಿವೆ. ಪೂರ್ವಿಕರು ಸ್ತರಿದ್ದರಾದರೂ ಅಜ್ಞಾನಿಗಳಾಗಿರಲಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಮೇ 1983 ರ 'ಜಿವಿತ್' ನಾಮಾಂಕಿತ ಕೊಂಕಣಿ ಪತ್ರದ 30-31 ನೇ ಪುಟದಲ್ಲಿ ಕಣಿಯ ಪ್ರಸಿದ್ಧ ಸಾಹಿತಿ ಮತ್ತು ಕವಿ ಚಾ.ಫ್ರಾ.ದೆ' ಕೊಸ್ತಾರವರು 'ಸಮಾಜಿಂತ್ ಆಳ್ವಾಲ್ಲೆ ್ಯಾಂಗಾರ್' (ಸಮಾಜದಲ್ಲಿ ಅಳಿದುಹೋದ ಗುಮಟೆ ಕಲಾವಿದರು) ಎಂಬ ಲೇಖನದಲ್ಲಿ ಯುನ್ನರಲ್ಲಿ ಸಮಕಾಲೀನ ಶ್ರೇಷ್ಠ ಗುಮಟೆ ಕಲಾಕಾರ ಮಂಗಳೂರಿನ ಬಿಜೈಯ ಶ್ರೀ ಕಿಮ್ ಪಿರೇರಾರವರ ಬಗ್ಗೆ ಬರೆಯುವಾಗ ಗುಮಟೆ ಹಾಗೂ ಗುಮಟೆ ಪದಗಳ ಬಗ್ಗೆ ದ ವಿವರ ಹೀಗಿದೆ-

ಗುಮಟೆಯ ವಿದ್ಯೆ ಪುರಾತನ ಕಾಲದಿಂದ ಕೊಂಕಣಿ ಸಮುದಾಯದಲ್ಲಿ ಸೃಷ್ಟಿಯಾಗಿದ್ದು, ಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ, ಮೊಮ್ಮಗನಿಂದ ಮರಿಮಗನಿಗೆ, ಮರಿ ಳಿಗೆ ಪೂರ್ವ ಪರಂಪರೆಯಿಂದ ಹರಿದು ಬಂದಿರುವಂಥಾದ್ದು. ಕೇವಲ ಮೌಖಿಕವಾಗಿ ಿಮ ನಾಜೂಕು ಮಾತುಗಳಿಂದ ಸಾಹಿತ್ಯಭರಿತವಾಗಿ, ತಾಳ ಲಯ ಬದ್ಧವಾದ ಕವಿತೆಗಳಿಂದ ಿಸಲ್ಪಟ್ಟ ಹಾಡುಗಳು ಕಾವ್ಯ ಸೌಂದರ್ಯದ ಕಣಜವಾಗಿ ಕವಿತಾ ಸಂಸಾರದ ಯಾವುದೇ ಪದ ಕಲಾ ಪ್ರಕಾರವನ್ನು ತಲೆಬಾಗುವಂತೆ ಮಾಡುವಂಥಾದ್ದಾಗಿದೆ. ಗುಮಟೆಯ ಸಂಗೀತದ ಡಿಯ ರೀತಿ ಗಮನಿಸಿದರೆ, ಇದು ಶಾಸ್ತ್ರೀಯ ಸಂಗೀತದ ಮಾತೃಮೂಲ ಎಂಬ ವಿಚಾರವು

ಯಾರಿಗೇ ಆದರೂ ಅರ್ಥವಾದೀತು.

ಆದರೂ ಈ ಜಾನಪದ ಸಂಗೀತ ತುಂಬಾ ಸರಳ ಹಾಗೂ ಹಿರಿತನದ ಘನತೆಯನ್ನು ಹೊಂದಿದೆ. ಈ ಸಂಗೀತದಲ್ಲಿ ನಾಲ್ಕು ವಿವಿಧ ತಾಳಗಳಿವೆ. ಒಂದೇ ಮಾಲಿಕೆಯಲ್ಲಿ ಚತುರ ಗುಮಟೆ ವಾದಕ ಮೂರು ತಾಳಗಳನ್ನು ಸೇರಿಸಿ, ವಾದನಮಾಡಿ ದುಡಿಸಿಕೊಳ್ಳುತ್ತಾನೆ. ಚಲಾವಣೆಯಲ್ಲಿರುವ ಬಹಳ ಸ್ವಾದಭರಿತ ತಾಳ 'ಲಳಿತ್'

ಓಗಾ ವ್ಹಡ್ಲೆಂ ಗೋಯಿಂಚ್ ಬಾ

ವ್ಹಡ್ಲ್ಯಾಂ ಗೊಯಾಂ ಶಹ್ರಾ ಮಾಜರಿ

ಕದ್ಮಾರಾಯ್ ರಾಜ್ ಕರಿವೋ

ತಾಗೇರಿ ಕನ್ಯಾ ಆಯ್ ಸುಂದರಿ

ದಿವ್ಸಾ ತೀನ್ ವೆಳಾ ಮರ್‌ದಾನ್ ಕರಿ

ಕನ್ಯಾಕ್ ಪಿರಾಯ್ ಭರ್ತೀ ಜಾಲಿವೋ

ಕನ್ಯಾ ಕಾಯ್ ರಗ್ತಾನ್ ಭರ್‌ಲೀ ವೋ

ಆವಯ್ಕ್, ಬಾಪಾಯ್ಕ್ , ಭಾವಾಕ್ ತಾಚ್ಯಾ

ತಿಚ್ಯಾ ಲಗ್ನಾಚಿ ಚಿಂತ್ತಾ ಲಾಗ್‌ಲಿ

ನಾಜೂಕು ತಾಳದ ಪೈಕಿ 'ಶೀದಾ ಥಾಪ್' ಅಂತ ಇನ್ನೊಂದು ತಾಳವಿದೆ. 'ಲಳಿತ್' ನಿಂದ ಅದೇ ಹಾಡು ಮುಂದುವರೆಯುತ್ತದೆ.

ಬಾಪಯ್ ಸೋಧಿತ್ ಕುಳಿಯೆವಂತ್‌ವೋ

ಅವಯ್ ಸೋಧಿತ್ ಧನವಂತ್

ಭಾವ್ ಸೋಧಿತ್ ಮರ್ಜೆವಂತ್...

ಅದೇ ಸ್ವಾದಭರಿತ ತಾಳದಲ್ಲಿ ಈ ಕಥೆ ಮುಂದುವರೆಯುತ್ತದೆ

ಅಭಿಂಗಾ ತೊ ರಾಯಿಚ್ ಮೂ

ಅಭಿಂಗಾ ರಾಯಾ ತುಜೊ ಕುಂವರ್ ವೊ

ಪೊವ್ಹ್ಯಾ ಶಹ್ರಾಲೊ ನಾತುವೋ

ತಾಚೆಂ ಕಾಂಯ್ ಬಾ ನಾಂವ್ ದೂರುತು

ಈಗ ಇದೇ ಹಾಡಿನಲ್ಲಿ ಕಲಿಸುವಾತ ಲಯವನ್ನು ಬದಲಿಸುತ್ತಾನೆ. ನಾಜೂಕು ರಲ್ಲಿದ್ದ ತಾಳಗಳು ' ಉಡ್ತೆಂ' ಯ ಶಬ್ಧ ತರಂಗಗಳಾಗಿ ಬದಲಾಗುತ್ತದೆ.

ದುರುತಾಚೆಂ ಕಾಮ್ ಸದಾಂ

ಿಕಾರೆಕ್ ವೆಚೆಂ

ಧೊಣಿ ಭಾಲೊ ಘೆವುನು ದೂರುತ್

ಭಾಯ್ರ್ ಸರ್‌ಲೊ

ಆನಿ ಭಾಯ್ರ್ ಸರ್‌ಲೊ ದೂರುತು

ರಾನಾಕ್ ಪಾವುಲೊ

ಇದಲ್ಲದೆ ತಾಳಗಳ ರೀತಿ ಇನ್ನೊಂದು ಪ್ರತ್ಯೇಕವಿದೆ. ಇಲ್ಲಿ ಗುಮಟೆಯ ಶಬ್ಧ ಗಗಳೊಂದಿಗೆ ಚಪ್ಪಾಳೆಗಳ ಶಬ್ಧವೂ ಕೇಳುತ್ತದೆ.

ಸಾಂ ಫ್ರಾನ್ಸಿಸ್‌ಗಾ ಸಾವೇರಾ

ಕಾಂಯ್ ಕುರ್ಪೆ ಭರಿತಾ

ದೆವಾ ಸಾಂಗಾತಾ

ಸದಾಂ ಕಾಳ್‌ಗಾ ಸುಖ್ ಭೋಗೀತಾ

ಗೋವಾದಲ್ಲಿ ಪೋರ್ಚುಗೀಸರ ಆಗಮನಕ್ಕಿಂತ ಮೊದಲು ದೇವಸ್ಥಾನಗಳಲ್ಲಿ ಉತ್ಸವಾದಿ ರ್ಭಗಳಲ್ಲಿ ಗುಮಟೆ ಬಾರಿಸಲ್ಪಡುತ್ತಿತ್ತು. ಗುಮಟೆಯ ಎರಡೂ ಬಾಯಿಗಳಿಗೆ ಹಗ್ಗ ಕುತ್ತಿಗೆಗೆ ನೇತು ಹಾಕಿ, ಗುಮಟೆ ಬಾರಿಸಿ, ಹಾಡುಗಳನ್ನು ಹಾಡುತ್ತಾ ಕುಣಿಯುತ್ತಿದ್ದರು. ರ್ಚುಗೀಸರು ಗುಮಟೆಯ ಮಹತ್ವವನ್ನು ಅರ್ಥ ಮಾಡಿಕೊಳ್ಳದೆ ಧರ್ಮದ ನೆಪದಲ್ಲಿ ಟೆ ವಿದ್ಯೆಯನ್ನು ಪೈಶಾಚಿಕ ಕಲೆ ಎಂದು ತಡೆಯೊಡ್ಡಿದ ಕಾರಣ, ಪೋರ್ಚುಗೀಸರ ದಿಂದ ಕುಣಿತವನ್ನು ಬಿಟ್ಟು ಬಿಡಲಾಯಿತು. ಕ್ರಿಶ್ಚಿಯನ್ನರು ಕುಳಿತು ಗುಮಟೆ ವಾದನಕ್ಕೆ ಭಿಸಿದರು. ಮುಂದಕ್ಕೆ ಇವರಲ್ಲಿ ಕುಳಿತುಕೊಂಡೇ ಗುಮಟೆ ಬಾರಿಸುವ ವಾಡಿಕೆ ಚಾಲ್ತಿಯಲ್ಲಿ . ಕುಡುಬಿ, ಖಾರ್ವಿ, ಸಿದ್ಧಿ – ಈ ಸಮುದಾಯಗಳಲ್ಲಿ ಗುಮಟೆ ಕುಣಿತ ಯಲ್ಲಿರುವುದರಿಂದ ಅವರ ಗುಮಟೆಗಳು ಕುಣಿಯುವುದಕ್ಕೆ ಅನುಕೂಲವಾಗುವಂತೆ ದಲ್ಲಿ ಚಿಕ್ಕವು. ಕ್ರಿಶ್ಚಿಯನ್ನರ ಗುಮಟೆಗಳು ಕುಳಿತು ಬಾರಿಸುವಂಥವುಗಳು ಆದುದರಿಂದ ಗುಮಟೆಗಳು ಆಕಾರದಲ್ಲಿ ದೊಡ್ಡವುಗಳಾಗಿವೆ.

ಧರ್ಮ, ಮಾನವ ಜೀವನದ ಒಂದು ಕೇಂದ್ರ. ಈ ಕೇಂದ್ರದಲ್ಲಿ ಅದರ ಕವಿತೆ ಅಥವಾ

ಸಂಗೀತೋಪಕರಣಗಳಿಗೆ ಅವಕಾಶ ಇಲ್ಲದಿದ್ದಲ್ಲಿ ಅವುಗಳು ಆ ಸಮಾಜದಲ್ಲಿ ತಿರಸ್ಕಾರಗೊಳ್ಳುತ್ತವೆ. ಯಾವ ಸಮಾಜದಲ್ಲಿ ಧರ್ಮ ಮತ್ತು ಜಾನಪದ ಸಂಸ್ಕೃತಿಗೆ ಅವಿನಾಭಾವ ಸಂಬಂಧವಿರುವುದಿಲ್ಲವೋ ಆ ಸಮಾಜದ ಜಾನಪದ ಕಲೆ ಸ್ವಾಭಾವಿಕವಾಗಿ ಅಳಿಯುತ್ತಾ ಬರುವುದನ್ನು ಕಾಣಬಹುದು. ಕ್ರಿಶ್ಚಿಯನ್ನರಲ್ಲಿ ಗುಮಟೆ ಕಲೆ ಅಳಿಯುತ್ತಾ ಬಂದಿರುವುದಕ್ಕೆ ಪೋರ್ಚುಗೀಸರು ಅಡೆತಡೆಗಳನ್ನು ಒಡ್ಡಿದುದು ಒಂದು ಕಾರಣವಾದರೆ, ಕ್ರಿಶ್ಚಿಯನ್ನರ ಧಾರ್ಮಿಕ ಆಚರಣೆಗಳ, ವ್ಯಾಪ್ತಿಯೊಳಗೆ ಗುಮಟೆಗೆ, ಗುಮಟೆ ಹಾಡುಗಳಿಗೆ, ಒಟ್ಟಾರೆಯಾಗಿ ಗುಮಟೆ ಕಲೆಗೆ ಅವಕಾಶವನ್ನೇ ಒದಗಿಸದಿದ್ದುದು ಪ್ರಬಲವಾದ ಎರಡನೇ ಕಾರಣ. ಮೂರನೇ ಕಾರಣ ಆಧುನೀಕರಣದ ಪ್ರಭಾವ ಹಾಗೂ ಪಾಶ್ಚಾತ್ತೀಕರಣದ ಕುರುಡು ಅನುಕರಣೆ. ಟಿಪ್ಪುವಿನ ಕಾಲದಲ್ಲಿ (1784-1799) ಭಯಂಕರ ಕಷ್ಟ ಕಾರ್ಪಣ್ಯಗಳಿಗೆ ಸಿಲುಕಿದ್ದರೂ ಕ್ರಿಶ್ಚಿಯನ್ನರು ಗುಮಟೆ ವಿದ್ಯೆಯನ್ನು ಮರೆತಿರಲಿಲ್ಲ. ಆದರೆ ಪಾಶ್ಚಾತ್ಯ ಆಧುನಿಕ ಸಂಗೀತ ಸಾಧನಗಳ ಉಪಸ್ಥಿತಿಯಲ್ಲಿ ಗುಮಟೆಯಂಥ ಕೇವಲ ಮಣ್ಣಿನಿಂದ ತಯಾರಿಸಲ್ಪಟ್ಟ ಸಂಗೀತ ಸಾಧನವನ್ನು ಉಪಯೋಗಿಸುವುದು ಅಲ್ಪತನವೆಂಬ ಭಾವನೆಯಿಂದಾಗಿ ಕ್ರಿಶ್ಚಿಯನ್ ಸಮಾಜದಲ್ಲಿ ಗುಮಟೆಗಳೂ ಅಳಿದವು, ಗುಮಟೆ ಕಲೆಯೂ ಅಳಿಯಿತು.

ಕ್ರಿಶ್ಚಿಯನ್ ಸಮುದಾಯದಲ್ಲಿ ಗುಮಟೆ ಕಲೆಯನ್ನು ಜೀವಂತವಾಗಿರಿಸಿದವರ ಪೈಕಿ ಮಂಗಳೂರಿನ ಬಿಜೈ ನೋಡಾ ಎಂಬಲ್ಲಿಯ ಪ್ರಸಿದ್ಧ ಕಲಾಕಾರ ಶ್ರೀ ಜೋಕಿಮ್ ಪಿರೇರಾ ಮತ್ತು ಅವರ ಕುಟುಂಬ ದೊಡ್ಡ ಹೆಸರು. ಗುಮಟೆ ಕಲಾ ಪರಂಪರೆಯನ್ನು ಅವರು ಪೀಳಿಗೆಯಿಂದ ಪೀಳಿಗೆಗೆ ಹಿರಿಯರ ದೇಣಿಗೆಯಾಗಿ ಉಳಿಸಿಕೊಂಡು ಬಂದವರಲ್ಲಿ ಖ್ಯಾತನಾಮರು. ಅವರ ಈ ಪ್ರತಿಭೆ ಹಾಗೂ ಸೇವೆಯನ್ನು ಪರಿಗಣಿಸಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯು 1998ರ 'ಗೌರವ ಜಾನಪದ ಪ್ರಶಸ್ತಿ' ನೀಡಿ ಗೌರವಿಸಿದೆ. ಮಾತ್ರವಲ್ಲ ಅವರ ಗುಮಟೆ ಹಾಡುಗಳ ಸಂಗ್ರಹವನ್ನು 2000ನೇ ವರ್ಷದಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಶ್ರೀ ಜೋಕಿಮ್ ಪಿರೇರಾರವರು ಇತ್ತೀಚೆಗಷ್ಟೇ ನಿಧನರಾಗಿದ್ದು ಅವರ ಕುಟುಂಬಸ್ಥರು ಈ ಕಲೆಯನ್ನು ಮುಂದುವರಿಸುತ್ತಿದ್ದಾರೆ.

2003 ರಲ್ಲಿ ಪ್ರಕಟವಾದ, ಪ್ರಸಿದ್ಧ ಸಂಗೀತಗಾರ ಹಾಗೂ ಮಂಗಳೂರಿನ ಸಂತ ಎಲೋಶಿಯಸ್ ಕಾಲೇಜಿನ ಪ್ರಾಧ್ಯಾಪಕ ದಿ। ಬೆನೆಟ್ ~ ಪಿಂಟೊರವರು ತನ್ನ 'Konkani Bards and Musicians of Kanara' ಎಂಬ ಗ್ರಂಥದಲ್ಲಿ ಕ್ರಿಶ್ಚಿಯನ್ ಗುಮಟೆ ಕಲಾವಿದರ ಸವಿಸ್ತಾರವಾದ ಪಟ್ಟಿ ನೀಡಿದ್ದಾರೆ. ಅದು ಹೀಗಿದೆ (ಪುಟ 338-347)

**ಮಂಗಳೂರು :**

**ಬೊಂದೆಲ್ :** ದಾಮಿಯಾ ನ್ ಸಾಲ್ವದೊರ್ ನೊರೊನ್ಹಾ, ಅವರ ಮಕ್ಕಳು ರೊಮಾನ್, ಸಂತಾನ್ ಮತ್ತು ಲಾರೆನ್ಸ್.

ಬೆಂದೂರ್ : ಡೆನಿಸ್ ಅಲ್ಬುಕರ್ಕ್ (Asst. H.M. Sac High school) ಅವರ ಆರ್ಚಿ ಅಲ್ಬುಕರ್ಕ್. ಇವರೊಂದಿಗೆ ಸಾಲ್ವದೊರ್ ಗೊವಿಯಸ್ ಆಡುತ್ತಿದ್ದರು.

ಬಿಜೈ : ಸೆಬಾಸ್ಟಿಯನ್ ಪಿಂಟೊ, ಅವರ ಸಹೋದರ ಪಾವ್ಲ್, ಸೆಬಾಸ್ಟಿಯನರ ಮಗ ಸೆಫ್ ಪಿಂಟೊ, ಜೊಸೆಫ್ ಪಿಂಟೊರವರ ಮಗ ಸಿಪ್ರಿಯನ್ ಉರ್ಬಾನ್ ಪಿಂಟೊ ಟ್ ಪಿಂಟೊರವರ ತಂದೆ)

ಅಲೆಕ್ಸ್ ಪಿರೇರಾ, ಅವರ ಮಗ ಜೋಕಿಮ್ ಪಿರೇರಾ (ಪ್ರಶಸ್ತಿ ವಿಜೇತ), ಜೋಯೆಲ್ ್ತ ನೊಯೆಲ್ ಪಿರೇರಾ, ಸೆಬಾಸ್ಟಿಯನ್ ಬ್ಯಾಪ್ಟಿಸ್ಟ್, ಸ್ಟೇನಿ ಡಿಮೆಲ್ಲೊ, ಫೆಲಿಕ್ಸ್, ಸಿಕ್ವೇರಾ, ೀನ್ ಫೆರ್ನಾಂಡಿಸ್

ಬಜ್ಜೋಡಿ : ಬೆಂಜಮಿನ್ ಮಿನೇಜಸ್, ಅವರ ಮಗ ಫ್ರಾನ್ಸಿಸ್ ಮಿನೇಜಸ್

ದೆರೆಬಯ್ಲ್ : ಲಾರೆನ್ಸ್ ಕೊನ್ಸೆಸೊ (ಲೊರ್ಸು ಮೇಸ್ತ್ರ), ಅಂಜೆಲಿನ್ (ಅಂಜುಬಾಯಿ)

ಫಳ್ನೀರು : ಬ್ಯಾಪ್ಟಿಸ್ಟ್ (ಬಾಥಾಮ್) ಮತ್ತು ಜೂಲಿಯಾನ್ (ಜಿಲ್ಲಾಮ್ ) ಮೊರಾಸ್

ನಾಗುರಿ : ಬಿ.ಎಲ್.ಡಿಕೋಸ್ತಾ (ಬಾಲ್ತು ಕೊಸ್ತಾ)

ಉರ್ವಾ : ಮಥಾಯಸ್ ಗೊನ್ಸಾಲ್ವಿಸ್ (ಮೊತಿಯಾ ಗೊಸಾಲ್)

ಕುಲ್ಶೇಖರ್ : ಚಾರ್ಲ್ಸ್ ಡಿಸೋಜಾ, ಕ್ಲಿಫರ್ಡ್ ಡಿಸೋಜಾ, ವಲೇರಿಯನ್ ಡಿಸೋಜಾ, , ರೊಬರ್ಟ್ ಡಿಸೋಜಾ, ಮೈಕಲ್ ಬ್ರಾಗ್ಸ್, ಬೆರ್ಟ್ರಮ್ ಲೋಬೋ, ರಾಜೇಶ್ ೀಬೋ, ಮಾರ್ಕ್ ಪಿಂಟೊ, ಇಸಾಕ್ ಪಿರೇರಾ, ಮತ್ತು ಸೆಬಾಸ್ಟಿಯನ್ ಪಿರೇರಾ.

ಕೊರ್ಡೆಲ್ : ಬೇಸಿಲ್ ಡಿಸೊಜಾ, ಅವರ ಮೊಮ್ಮಗ ಕ್ಲಿಫರ್ಡ್ ಡಿಸೋಜಾ

ಅಂತೊನಿ, ಜೋಸೆಫ್ ಮತ್ತು ಲಿಯೊ ಡಿಸಿಲ್ವಾ

ಬೆರ್ನಾಡ್ ಡಿಸೋಜಾ, ಪಿಯಾದ್ ಮತ್ತು ಸಾಲಾ ವೇಗಸ್

ಪಾವ್ಲ್, ಬ್ಯಾಪ್ಟಿಸ್ಟ್ ಮತ್ತು ಅಲೆಗ್ಸಾಂಡರ್ ಡಿ'ಸಿಲ್ವಾ- ಬಂಟಗುರಿ ನಿಡ್ಡೆಲ್

ಸೆಬಾಸ್ಟಿಯನ್ ಪಿಂಟೊ ಮತ್ತು ಅವರ ಮಗ ಮಾರ್ಕ್ - ಗೊಕರ್ನ್ ನಿಡ್ಡೆಲ್

ಜೇಕಬ್ ಕಾಸ್ತೆಲಿನ್ ಮತ್ತು ಸೆಬಾಸ್ಟಿಯನ್ (ಬಾಬಿ) ಡಿ'ಕುನ್ಹಾ - ಮೇಲ್ತೋಟ

ಸೆಬಾಸ್ಟಿಯನ್ (ಶಾಬಿ) ಪಿಂಟೊ ಮತ್ತು ಕುಟುಂಬ - ಸಾನಗುರಿ

ಸಾಲ್ವದೊರ್ ರೇಗೊ ಮತ್ತು ಕುಟುಂಬ -ಸಾನಗುರಿ

ಕುಡುಪು ಪಂಜುರೆಲ್ : ಮೊಂತು ಮರಿಯಾನ್ ಡಿ'ಸಿಲ್ವಾ (ಮೊನ್ನಾ ಕಾಮತ್), ಅವರ

ಮಕ್ಕಳು ಜೊರ್ಜ್, ದಿಯೆಗೊ

ಜೊಸೆಫ್, ಮೈಕಲ್ (ಬಾಬ್ಲಿ) ಜೊನ್, ವಿಕ್ಟರ್, ಅಲ್ಫೊನ್ಸ್, ಸೆಬಾಸ್ತಿಯನ್ (ಬಾಬಿ), ಸೆಬಾಸ್ತಿಯನ್ (ಬಸ್ತ್ಯಾಂವ್), ಬೆರ್ನಾಡ್ ಫೆರ್ನಾಂಡಿಸ್

ಹಿಲರಿ ಗೌನ್ಸ್, ಸೆಬಾಸ್ತಿಯನ್ ಗೌನ್ಸ್ - ಗುಂಡ್ಯೆ ಕುಡುಪು

ಸಾಂತಾನ್ ಲೋಬೋ ಪಿಲಿಕುಮೇರಿ, ಅವರ ಮಕ್ಕಳು ಸೆಬಾಸ್ತಿಯನ್, ಆಲ್ಬರ್ಟ್ಸ್, ಜೋಕಿಮ್ ಡಿ'ಸಿಲ್ವಾ - ಯೆರ್ಮುಡಿ

ಗ್ರೆಗೋರಿ ಮೊಂತೇರೊ ಪೈ (ಗಿರ್ಗೊಲ್ ಪೈ), ಅವರ ಮಗ ಆಲ್ಬರ್ಟ್ ಮೊಂತೇರೊ ಪೈ (ಆಬುಟ್ ಪೈ )- ಕುಡುಪು

ಬಾಬ್ಲಿ ಮತ್ತು ಜೋನ್ ಡಿಸಿಲ್ವಾ - ಕುಡುಪು

ನಿಡ್ಡೆಲ್ : ರಾಫಾಯೆಲ್ ರೇಗೊ (ಇವರ 26 ಕಲಾವಿದರ ತಂಡವಿತ್ತು)

ಅವರ ತಮ್ಮ ಜೊನ್ ಆಲ್ಬರ್ಟ್ ರೇಗೊ, ತೋಮಸ್ ಡಿ'ಸಿಲ್ವಾ, ಗ್ರೆಗರಿ ಮಿನೇಜಸ್, ಕುಲ್ಶೇಕರ್ ಗೋಕರ್ನಾದ ಸಾಲ್ವದೊರ್ ಡಿಸೊಜಾ, ಬೇಸಿಲ್ ಡಿಸೋಜಾ, ಸೆಬಾಸ್ತಿಯನ್ ಡಿ'ಸೋಜಾ, ಆಲ್ಬರ್ಟ್ ಮಿನೇಜಸ್, ಜೋಸೆಫ್ ಮಿನೇಜಸ್, ಬೊನಾ (ಅಲೆಕ್ಸ್) ಪಿರೇರಾ, ಮಾರ್ಟಿನ್ ಗೊನ್ಸಾಲ್ವಿಸ್, ಸೆಬಾಸ್ತಿಯನ್ ಪಿಂಟೊ - ಮರೋಳಿ, ಫಾವುಸ್ತಿನ್ ರೇಗೊ, ಗಾಬ್ರಿಯಲ್ (ಗಾಬ್ರು) ರೇಗೊ, ಲೋರೆನ್ಸ್ ರೇಗೊ (ಲೊರ್ನು ನ್ಯಾಕ್), ಪಿಯಾದ್ ರೇಗೊ -ನೀರಪಾದೆ, ಇಮಾನುಯಲ್ (ಮೊನ್ನಾ) ಪಿಂಟೊ -ನಿಡ್ಡೆಲ್, ಲಿಯೊ ಕ್ರಾಸ್ತಾ, ಅಲೆಗ್ಸಾಂಡರ್ ಡಿಸಿಲ್ವಾ ( ಅಲ್ಪು ಕಾಮತ್), ಸೆಬಾಸ್ತಿಯನ್ ಡಿಸೋಜಾ, ಆಲ್ಫೊನ್ಸ್ ಮಿನೇಜಸ್, ಆಲ್ಫೊನ್ಸಸ್ ಪಿಂಟೊ, ಬೊನವೆಂಟರ್ ಪಿಂಟೊ, ಫ್ರಾನ್ಸಿಸ್ ಪಿಂಟೊ, ಲಿಯೊ ಪಿಂಟೊ, ಲಾರೆನ್ಸ್ ವೇಗಸ್, ಲಿಯೊ ವೇಗಸ್

ಕೀಲ್ಯೆ : ಆಲ್ಬರ್ಟ್ ಡಿ'ಸೋಜಾ, ಆಲ್ಬರ್ಟ್ ಮಿನೇಜಸ್, ಗ್ರೆಗರಿ ಪಿರೇರಾ, ಲಾರೆನ್ಸ್ ವಾಸ್, ಸೆಬಾಸ್ತಿಯನ್, ಮರಿಯನ್, ರೊಸಾರಿಯೊ, ಜೊನ್ ಡಿ'ಸೋಜಾ, ದೇವಿಡ್ ಪಿರೇರಾ

ಕೌಡೂರು (ಗುರುಪುರ ಕೈಕಂಬ) : ಫ್ರಾನ್ಸಿಸ್ ರೇಗೊ, ಮಾರ್ಟಿನ್ ರೇಗೊ - ಬಜ್ಪೆ

ಬಂಟ್ವಾಳ : ಬಾಬು ಮತ್ತು ಮೊನ್ನಾ ವಾಸ್ -ಮೊಲೆಬಾವ್ ಫಾರ್ಲಾ

ಬೆಲ್ಚಾರ್ ರೊಡ್ರಿಗಸ್ -ಮೇನಾಡ್ ಕಾಡಬೆಟ್ಟು

ಸೆಬಾಸ್ತಿಯನ್ ಪಾಯಸ್ - ಕಾಯರಗುಂಡಿ ಮೂಡು ನಡುಗೋಡು

ಸಾಲ್ವದೋರ್ ಸಿಕ್ವೇರಾ - ವಗ್ಗ

ಇಗ್ನೇಶಿಯಸ್ ಪಿರೇರಾ, ಅವರ ಮಕ್ಕಳು - ಪೆಟ್ರಿಕ್, ದೊಮಿಂಗೊ, ದೆನಿಯಲ್, -ಮೂಡ್ಯೆಕೋಡಿ ಬೆಳ್ಳೂರ್

ಸೆಬಾಸ್ಟಿಯನ್ ಫೆರ್ನಾಂಡಿಸ್ (ಶಾಬಿಶೆಟ್) ಅಂತೊನಿ ಪಿಂಟೊ -ಇರಾಜೆ ಮೊಡಂಕಾಪು

ಬಂಟ್ವಾಳ ಬೆಳ್ತಂಗಡಿ ರಸ್ತೆ : ಮಡಂತ್ಯಾರು ಬಂಗೇರಕಟ್ಟೆ ಶೇರಾ ಕುಟುಂಬದ ಾದಿಗಳಾದ ಬ್ಯಾಪ್ಟಿಸ್ಟ್, ಬೆಂಜಮಿನ್, ಕೆಮಿಲ್, ಲಿಯೊ, ಲಿಗೊರಿ, ಲೂಯಿಸ್, ರಿಯೊ

**ಬೆಳ್ತಂಗಡಿ :**

**ಬಾರ್ಕೊಡಿ ಮೇಲಾಂತಬೆಟ್ಟು :** ಗ್ರೆಗರಿ ಡಿಸೋಜಾ, ಸಂತಾನ್ ಡಿ'ಸೋಜಾ, ಮಾವ್ರಿಸ್ ಸ್, ಸಂತಾನ್ ಮೊನಿಸ್, ಕೆಮಿಲ್ ಪಿಂಟೊ, ಬ್ಯಾಪ್ಟಿಸ್ಟ್ ವೇಗಸ್

**ಬದ್ಯಾರ್ :** ಲೂಯಿಸ್ ಕ್ರಾಸ್ತಾ, ಸಂತಾನ್ ಮತ್ತು ಸೈಮನ್ ಸಿಕ್ವೇರಾ, ಅತ್ತುಸ್ ಜೇಕಬ್ ವೇಗಸ್

**ಅರ್ವಾ :** ಅಂತೊನಿ ಫೆರ್ನಾಂಡಿಸ್, ರೊಸಾರಿಯೊ ಫೆನಾಂಡಿಸ್, ಕೆಮಿಲ್ ಪಿರೇರಾ

**ಸಾಲ್ಕೂರು :** ಜೊನ್ ಕ್ರಾಸ್ತಾ, ಪಿಯುಸ್ ಕ್ರಾಸ್ತಾ, ವಲೆರಿಯನ್ ಕ್ರಾಸ್ತಾ.

**ಫಜೀರ್ / ಅಮ್ಮೆಂಬಳ :** ಬೊನವೆಂಚರ್ (ಇಂತು) ನೊರೊನ್ಹಾ - ಫಜೀರ್

ಅಂತೊನಿ ಡಿ'ಸೋಜಾ ಮತ್ತು ಅವರ ಮಗ ಜೊನ್ ಬ್ಯಾಪ್ಟಿಸ್ಟ್ ಡಿಸೋಜಾ - ಂಬಳ

ಅಲೆಗ್ಸಾಂಡರ್ ಮತ್ತು ದೇವಿಡ್ ರೊಡ್ರಿಗಸ್ (ಅಲ್ಸು ಮತ್ತು ದಾವಿದ್ ಪಡ್ವಳ್) - ಟೆ ಗ್ರಾಮ

ಅಗಸ್ಟಿನ್ ಡಿ'ಸೋಜಾ, ಸಾಲ್ವದೋರ್ ಡಿಸೋಜಾ, ಅಂತೊನಿ ಪಡ್ವಳ್, ಬೇಸಿಲ್ ' - ಚೇಳೂರ್ (ಕೊಪ್ಲ)

ಸಾಲ್ವದೋರ್ ಡಿಸೋಜಾ, ಬ್ಯಾಪ್ಟಿಸ್ಟ್ ಡಿ'ಸೋಜಾ, ಪುತ್ತು ಡಿ'ಸೋಜಾ, ಕೊಪ್ಪ ತೋಟ

ಪಾವ್ಲ್ ಪಡ್ವಳ್, ಅವರ ಮಗ ದೇವಿಡ್ ಪಡ್ವಳ್, ಮೊಮ್ಮಕ್ಕಳು ಸಾತುರ್‌ನ್ನೆನ್ ವಿಲಿಯಮ್ ಪಡ್ವಳ್, ಸಹೋದರ ಸಾಲ್ವದೊರ್ ಪಡ್ವಳ್, ಅವರ ಮಕ್ಕಳು ನ್, ಕೆಮಿಲ್ ಮತ್ತು ಲೂಯಿಸ್, ಲೂಯಿಸ್ ಡಿ'ಸೋಜಾ - ಸಜಿಪ

**ಮಿಯ್ಯಾರು (ಕಾರ್ಕಳ ) :** ಡೇವಿಡ್ ಕೊರೆಯ, ಅಲ್ಬರ್ಟ್ ಡಿ'ಸೋಜಾ, ದೇವಿಡ್ ಜಾ, ಲೂಯಿಸ್ ಡಿ'ಸೋಜಾ ಪಾವ್ಲ್ ಡಿ'ಸೋಜಾ, ಇಸಿದೋರ್ ಪಿರೇರಾ, ಅಲ್ಫೊನ್ಸಸ್

ವಾಸ್, ಲೂಯಿಸ್ ವಾಸ್, ಅಬ್ರಹಾಮ್ ಡಿ'ಸೋಜಾ, ಜೊನ್ ಡಿ'ಸೋಜಾ, ಮಾರ್ಸೆಲ್ ಡಿ'ಸೋಜಾ, ಬೊನವೆಂಚರ್ ತಾವ್ರೊ.

**ಮೂಡಬಿದ್ರೆ :**

- **ಹೊಸ್ಪೆಟ್ :** ಅಂತೊನಿ ಡಿ'ಸೋಜಾ, ಮಾರ್ಸೆಲ್ ಮೆಂಡೊನ್ಸಾ, ವಿಕ್ಟರ್ ಸಾಂತು ಮಾಯರ್ ಮತ್ತು ತಂಡ

**ತಾಕೊಡೆ :** ಆಲ್ಫೊನ್ಸಸ್ ಕ್ರಾಸ್ತಾ, ಬಾಬಿನ್ ಕ್ರಾಸ್ತಾ, ಲಾರೆನ್ಸ್ ಕ್ರಾಸ್ತಾ, ಸೆಬಾಸ್ಟಿಯನ್ ಕ್ರಾಸ್ತಾ, ಕ್ಷೇವಿಯರ್ ಧೊಂದ್, ಬೆಂಜಮಿನ್ ಲೋಬೋ, ಆಗಸ್ಟಿನ್ ನಜ್ರೆತ್, ಕೊಂಬ್ಲೊ ಪಿಂಟೊ

**ನಾರಾವಿ / ನೆಲ್ಲಿಕಾರ್ :**

**ನಾರಾವಿ:** ಕ್ಷೇವಿಯರ್ ರೊಡ್ರಿಗಸ್, ಅವರ ಮಗ ಮತಾಯಸ್ ರೊಡ್ರಿಗಸ್, ಮೊಮ್ಮಗ ಆಗಸ್ಟಿನ್, ಬೆಂಜಮಿನ್, ದೇವಿಡ್, ಸಾಲ್ವದೋರ್

ಬಾಲ್ತಾರ್ ಫೆರ್ನಾಂಡಿಸ್ - ಡಂಬಡ ನಾರಾವಿ

**ಮಾಂಟ್ರಾಡಿ :** ಡಿಸಿಲ್ವಾ ಕುಟುಂಬದ ಬ್ಯಾಪ್ಟಿಸ್ಟ್, ರೊಸಾರಿಯೊ ಮತ್ತು ಅವರ ಮಗ ಇಗ್ನೇಶಿಯಸ್ ಸೆಬಾಸ್ಟಿಯನ್

ಜೊನ್ ಡಿಸೋಜಾ, ಸೆಬಾಸ್ಟಿಯನ್ ಡಿ'ಸೋಜಾ, ಜೊನ್ ಪಿರೇರಾ

**ನಾಂಡಿಲ :** ಲೂಯಿಸ್ ಫೆರ್ನಾಂಡಿಸ್ ಅವರ ಮಗ ಪಾವ್ಲ್ ಫೆನಾಂಡಿಸ್

**ಶಿರ್ತಾಡಿ :** ಇಗ್ನೇಶಿಯಸ್ ಕುತಿನ್ಹಾ ಮತ್ತು ಆಲ್ಫೊನ್ಸಾ ಡಯಾಸ್

**ನೆಲ್ಲಿಕಾರ್ :** ಗ್ರೆಗೊರಿ (ಗಿರ್ಗೊಲ್) ತಾವ್ರೊ, ಫ್ರಾನ್ಸಿಸ್ (ಪೊರಾಸ್ಕ್) ತಾವ್ರೊ, ಆವೆಲಿನ್ (ಆವ್ಲ್) ಮೊಂತು ಮತ್ತು ಸೆಬಾಸ್ಟಿಯನ್ (ಬೊಸ್ತು) ರೊಡ್ರಿಗಸ್

**ಒಮ್ಜೂರ್ :** ಸಾಲ್ವದೋರ್ ಡಿ'ಸೋಜಾ ಪಕ್ಕಳಪಾದೆ, ಪಾದೆಮಾರ್ ಲೋಬೋ, ಲೂಯಿಸ್ ಮತ್ತು ಮಾರ್ಸೆಲ್ ಡಿ'ಸೋಜಾ ಕೊಡ್ಮಣ್, ಅಲೆಕ್ಸ್ ಸಲ್ಡಾನ್ಹಾ ಮೆರ್ಲಪದವು, ಸೆಬಾಸ್ಟಿಯನ್ ಡಿ'ಸೋಜಾ ಪೊಯ್ಯುಬಯ್ಲ್, ರೊಸಾರಿಯೊ ಡಿ'ಸೋಜಾ , ಕಜೆತಾನ್ ಶೆಟ್ ಮತ್ತು ಸೆಬಾಸ್ಟಿಯನ್ ಶೆಟ್ - ತೇವು ವಾಢೆ, ತೊಮಾಸ್ ಡಿ'ಸಿಲ್ವಾ ಮತ್ತು ಅವರ ಮಗ ಪಿಯಾದ್ -ಮೇರೆಮಜಲು, ವಿಲಿಯಮ್ ರಸ್ಕಿನ್ಹಾ

ಜೇಕಬ್ ಲೋಬೋ, ಅವರ ಮಗ ಸೆಬಾಸ್ಟಿಯನ್ ಲೋಬೊ, ಲಿಗೊರಿ ಲೋಬೋ ಮತ್ತು ಇಸಾಕ್ ಪಿರೇರಾ - ಬಾಡೂರ್ ಒಮ್ಜೂರ್.

ಆಲ್ಬರ್ಟ್ ಲಸ್ರಾದೊ, ಮಾರ್ಸೆಲ್ ಲಸ್ರಾದೊ, ಜೋಸೆಫ್ ಲೋಬೊ, ಜೇಕಬ್ ...ತ್, ಜೊನ್ ಪಡ್ವಳ್, ಕಾಸ್ಮಿರ್ ಪಿರೇರಾ, ಜೇಕಬ್ ಪಿರೇರಾ, ಕ್ಸೇವಿಯರ್ ಪಿರೇರಾ, ...ನ್ ಸಲ್ದಾನ್ಹಾ, ತೋಮಸ್ ಸಲ್ದಾನ್ಹಾ ಮತ್ತು ಪೀಟರ್ ವಾಸ್ - ಒಮ್ಜೂರ್.

ಪೇಜಾರ್ - ಫ್ರಾನ್ಸಿಸ್ ಡಿ'ಸೋಜಾ (ಅಬ್ರಹಾಮ್ ಡಿ'ಸೋಜಾ = ಅ. ಬಾ. ...ಡನ್‌ರವರ ತಂದೆ) ಕ್ಸೇವಿಯರ್ ಕುತಿನ್ಹಾ, ಕಾಸ್ಮಿರ್ ಡಿ'ಸೋಜಾ

ಚಾರ್ಲ್ಸ್ ಡಿ'ಸೋಜಾ, ಜೇಕಬ್ ಡಿ'ಸೋಜಾ , ಮಾರ್ಸೆಲ್ ಫೆರ್ನಾಂಡಿಸ್, ಬೇಸಿಲ್ ...ೋಜಾ, ಜೊನ್ ಫೆರ್ನಾಂಡಿಸ್, ಆಲ್ಬರ್ಟ್ ರೊಡ್ರಿಗಸ್ - ಕುತ್ತೆತ್ತೂರ್

**ಪುತ್ತೂರು :** ಮೊನ್ಸಾ ಮಸ್ಕರೇನ್ಹಸ್ ಬಟ್ವಾದರ್, ಅಲೆಗ್ಸಾಂಡರ್ (ಅಲ್ಲು) ಡಿ'ಸೋಜಾ ...ತ್ತು ಅವರ ಮಗ ಜೋಸೆಫ್, ವಲೇರಿಯನ್ ಮತ್ತು ಚಾರ್ಲ್ಸ್ - ಏಳ್ಮುಡಿ, ಅಲೆಕ್ಸ್ ...ತ್ತು ಸಿಲ್ವೆಸ್ಟರ್ ಮಸ್ಕರೇನ್ಹಸ್ - ಹೆಬ್ಬಾರಮೈಲ್

**ವೇಣೂರು** - ಜೇಕಬ್ ಮೊಂಡೊನ್ಸಾ ಮತ್ತು ಬಾಬ್ಲಿ ಮಸ್ಕರೇನ್ಹಸ್ - ಪೆರ್ಮುಡ. ...ರ್ಟ್, ಮರಿಯಾನ್, ಮೊಂತು ಮತ್ತು ಜೆರ್ಮಿಯನ್ ಮೊರಾಸ್ - ಪಡ್ಡಂದಡ್ಕ. ...ಮನೆಲ್ ಲೋಬೊ ಕುಟುಂಬ ಪೆರ್ಮುಡ, ಮೆಂಡೋನ್ಸಾ ಕುಟುಂಬ -ಪೆರ್ಮುಡ

ಕೊರ್ಡಿಯೆರೊ ಕುಟುಂಬ -ಪೆರ್ಮುಡ

ಕರಿಮನೆಲ್ ಕುಟುಂಬ -ಪೀಟರ್ ಲೋಬೋ ಮತ್ತು ಅವರ ಮಗ ತೊಮಸ್ ಲೋಬೋ

ಮೆಂಡೋನ್ಸಾ ಕುಟುಂಬ - ಜೇಕಬ್ ಮೆಂಡೋನ್ಸಾ, ಅವರ ಮಕ್ಕಳು ಮೆನುಯಲ್ ...ತ್ತು ಮೌರಿಸ್ ಮೆಂಡೊನ್ಸಾ

ಕೊರ್ಡಿಯೆರೊ ಕುಟುಂಬ - ಬೆಂಜಮಿನ್ ಮತ್ತು ಅವರ ಮಗ ಮೊಂತು, ಸಹೋದರ ...ನ್ಸಿಸ್ ಕೊರ್ಡಿಯೆರೊ

**ಇತರ ಪ್ರದೇಶಗಳು :**

**ಅಮ್ಮುಂಜೆ** - ಫ್ರಾನ್ಸಿಸ್, ಸಂತಾನ್, ಸೆಬಾಸ್ಟಿಯನ್, ಬ್ಯಾಪ್ಟಿಸ್ಟ್ -ಕುತಿನ್ಹಾ ...ೋದರರು

**ಕಟೀಲು** - ಬೆಂಜಮಿನ್ ಲೋಬೋ

**ಕೊಡ್ಮಣ್** - ಮಾರ್ಸೆಲ್ ಡಿಸೋಜಾ

**ಕುಪ್ಪೆಪದವು** - ಸೆಬಾಸ್ಟಿಯನ್ ಪಿಂಟೊ, ದೊಮಿಂಗೊ ರೊಜಾರಿಯೊ

**ಮೊಗರ್ನಾಡ್** - ಪಾವ್ಲ್ ಮಸ್ಕರೇನ್ಹಸ್

**ಮೂಡುಬೆಳ್ಳೆ** - ಲಾಜರಸ್ (ಲಾದ್ರು)

**ಪಾಲಡ್ಕ** - ಸೆಬಾಸ್ಟಿಯನ್ (ಬಾಬಿ) ರೊಡ್ರಿಗಸ್

**ಪೆರ್ಮಾಯಿ** - ಪಾಸ್ಕಲ್ ಲೋಬೊ, ಜೊನ್ ಮತ್ತು ಸೆಬಾಸ್ಟಿಯನ್ ಡಿಸೋಜಾ

**ಸಿದ್ಧಕಟ್ಟೆ** - ಮೈಕಲ್ ಮೊರಾಸ್

ವಿಟ್ಲ - ಸೆಬಾಸ್ಟಿಯನ್ (ಬಾಬಿ) ಸಿಕ್ವೇರಾ

**ಗುಮಟೆ ಕುಟುಂಬಗಳು :**

ಅಮ್ಟಾಡಿ -ಡಿ'ಸೋಜಾ ಕುಟುಂಬ

ಬಂಟ್ವಾಳ -ನೊರೊನ್ಹಾ ಕುಟುಂಬ

ಕೌಡೂರು - ರೊಡ್ರಿಗಸ್ ಮತ್ತು ಪಿಂಟೊ ಕುಟುಂಬ

ತಡಂಬಿಲ್ - ಮೊಂತೇರೊ ಕುಟುಂಬ

ಕೆಮ್ಮಣ್‍ಕುದ್ರು - ಮಿನೆಜಸ್ ಕುಟುಂಬ

ಯೆಕ್ಕಾರು - ಪಿಂಟೊ ಕುಟುಂಬ

**ಸಿದ್ಧಿ ಸಮುದಾಯದಲ್ಲಿ ಗುಮಟೆ :** ದಕ್ಷಿಣ ಆಫ್ರಿಕಾ ಮೂಲದವರಾದ ಸಿದ್ಧಿ ಸಮುದಾಯ ನೀಗ್ರೋಯಿಡ್ ಸಂತತಿಯ ದೈಹಿಕ ಲಕ್ಷಣಗಳನ್ನು ಹೊಂದಿರುವ ಜನಾಂಗ. ಕರಿವರ್ಣದ ಬಲಿಷ್ಠ ಅಂಗರಚನೆ, ಅಗಲ ಹಾಗೂ ದಪ್ಪವಾದ ತುಟಿಗಳು, ಗುಂಗುರು ಕೂದಲು, ಸೊಟ್ಟ ಮೂಗು, ನಾಚಿಕೆಯ ಸ್ವಭಾವ - ಮುಂತಾದ ಚಹರೆಗಳಿಂದ ಸಿದ್ಧಿ ಜನರನ್ನು ಸುಲಭವಾಗಿ ಗುರುತಿಸಬಹುದು. 'ಸಿದ್ಧಿ' ಅಥವಾ 'ಕಾಫಿರ್' ಅಂದರೆ 'ಕೂಲಿಕಾರ' ಎಂಬುದಾಗಿ ಸರ್ ಹರ್ಬರ್ಟ್ ರಿಸ್ಲೇ ಎಂಬ ವಿದ್ವಾಂಸರು ಅರ್ಥ ನೀಡಿದ್ದಾರೆ.

ಆಫ್ರಿಕಾದಿಂದ ಬಂಗಾಲದ ರಾಜರು ತಂದ ಗುಲಾಮರೇ ಇಂದಿನ 'ಸಿದ್ಧಿ' ಜನಾಂಗ ಎಂಬ ಒಂದು ನಂಬಿಕೆ ಇದೆ. ಮುಸ್ಲಿಂ ಆಡಳಿತಗಾರರಾದ ರಾಜರು ಭಾರತದ ಮೇಲೆ ಆಕ್ರಮಣ ಮಾಡಿದಾಗ ಚಕ್ರವರ್ತಿ ರುಕ್ನುದ್ದೀನ್ ಬರ್ಬಾಕ್ (1459 - 1474) ನು ಸಿದ್ಧಿಯರನ್ನು ಬಂಗಾಳದಿಂದ ಓಡಿಸಿದ. ಪುನಃ ಅಲ್ಲಾವುದ್ದೀನ್ ಹುಸೇನ್ (1493-1519) ನು ಸಿದ್ಧಿಯರ ಮೇಲೆ ದಬ್ಬಾಳಿಕೆ ನಡೆಸಿದನು. ಹೀಗೆ ದಕ್ಷಿಣಕ್ಕೆ ವಲಸೆ ಬಂದು ಪಶ್ಚಿಮ ಕರಾವಳಿ ಪ್ರದೇಶಗಳಲ್ಲಿ ನೆಲೆನಿಂತ ಸಿದ್ಧಿ ಜನಾಂಗ ಪೋರ್ಚುಗೀಸರ ಆಡಳಿತ ಕಾಲದಲ್ಲಿ ಕರ್ನಾಟಕಕ್ಕೆ ಬಂದವರು ಉತ್ತರ ಕನ್ನಡ ಜಿಲ್ಲೆಯ ಅರಣ್ಯ ಪ್ರದೇಶಗಳಲ್ಲಿ ವಸತಿ ಮಾಡಿಕೊಂಡರು.

ಸಂಶೋಧಕರ ಮತ್ತು ಜನಾಂಗೀಯ ಅಧ್ಯಯನಕಾರರ ಇನ್ನೊಂದು ತೀರ್ಮಾನ ಪ್ರಕಾರ ೋರ್ಚುಗೀಸರು ಆಫ್ರಿಕಾದಲ್ಲಿಯ ತಮ್ಮ ರಾಜಾಡಳಿತಕ್ಕೊಳಪಟ್ಟ ಮೊಜಾಂಬಿಕ್ ಶದಿಂದ ಸಿದ್ಧಿಯರನ್ನು ಭಾರತಕ್ಕೆ ಗುಲಾಮರಾಗಿ ಮತ್ತು ಸೈನಿಕರಾಗಿ ತಂದರು. ರ್ಚುಗೀಸರ ಸೇನೆಗಳಿಂದ ತಪ್ಪಿಸಿಕೊಂಡು ಓಡಿ ಬಂದ ಸಿದ್ಧಿಯರು ಉತ್ತರ ಕನ್ನಡದ , ಹಳಿಯಾಳ, ಯಲ್ಲಾಪುರ, ಮುಂಡಗೋಡು, ಸಿರಸಿ, ಅಂಕೋಲಾ - ಈ ಊರುಗಳ ಮೇಡುಗಳಲ್ಲಿ ಅಡಗಿಕೊಂಡು ಜೀವಿಸಿದರು. ಪ್ರಕೃತ ಸಿದ್ಧಿ ಸಮುದಾಯದಲ್ಲಿ ಹಿಂದೂ, ್ಲಂ, ಕ್ರಿಶ್ಚಿಯನ್ - ಮೂರೂ ಧರ್ಮಗಳಿಗೆ ಸೇರಿದ ಸಿದ್ಧಿಯರಿದ್ದಾರೆ ಆದರೂ ಹೆಚ್ಚಿನವರು ಕಣಿ ಮಾತೃಭಾಷೆಯವರಾಗಿದ್ದಾರೆ.

ಸಮಾಜದ ಉತ್ತಮ ವರ್ಗದವರೆನಿಸಿದ ಜನತೆ ಹಿಂದಿನಿಂದಲೂ ಸಿದ್ಧಿಯರನ್ನು ತಮ್ಮ ್ಯಸಾಧನೆಗೆ ಬಳಸಿಕೊಂಡಿದ್ದಾರೆ. ಆದುದರಿಂದ ಈ ಶೋಷಿತ ವರ್ಗ ಆರ್ಥಿಕ, ಸಾಮಾಜಿಕ ೂ ಶೈಕ್ಷಣಿಕವಾಗಿ ಸುಧಾರಣೆಗೊಳ್ಳದೆ, ತುಂಬಾ ಹಿಂದುಳಿದು, ಸುಧಾರಿತ ಸಮಾಜದಿಂದ ಸಿಕೊಳ್ಳುತ್ತಾ ಬಂದಿರುವುದನ್ನು ಗಮನಿಸಬಹುದು. ಆದರೆ, ಈ ಸಮುದಾಯದಲ್ಲಿ ಂತವಾಗಿರುವ ಜಾನಪದ ಸಂಗೀತ, ಸಂಪ್ರದಾಯ ಬದ್ಧ ನೃತ್ಯ, ಮತ್ತು ಸಂಗೀತ ಸಾಧನ ಪ್ರಸ್ತುತ ಪಡಿಸುವ ಜನಪದ ಸಾಹಿತ್ಯಭರಿತ ಜಾನಪದ ಕಲೆ ಶ್ರೀಮಂತವಾಗಿದೆ. ಸಿದ್ಧಿ ಾಜದವರು ಪ್ರದರ್ಶಿಸುವ "ಘುಗ್ಡಿ ನಾಚ್" ನೃತ್ಯ ಒಂದು ಪ್ರಭಾವಿ ಕಲೆ. ಸ್ತ್ರೀಯರು ್ತಳಾಕಾರದಲ್ಲಿ ನಿಂತು, ಕೈಗಳಲ್ಲಿ ಬಿಂದಿಗೆಗಳನ್ನು ಹಿಡಿದುಕೊಂಡು ಬಿಂದಿಗೆಯೊಳಗೆ ುಯಿಂದ ಗಾಳಿ ಊದುತ್ತಾ, ವಿವಿಧ ರೀತಿ ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ. ಬಿಂದಿಗೆ ದುಕೊಳ್ಳದೆಯೂ ಖಾಲಿ ಕೈಗಳಿಂದ ಚಪ್ಪಾಳೆ ತಟ್ಟುತ್ತಾ ಕುಣಿಯುವುದೂ ಕೆಯಲ್ಲುಂಟು. ಹೀಗೆ ನೃತ್ಯ ಮಾಡುವಾಗ ಹಾಡುಗಳನ್ನು ಹಾಡುತ್ತಾ 'ಗುಮಟೆ' ಸುತ್ತಾರೆ. ಗುಮಟೆಯೊಂದಿಗೆ ತಾಳ ಬಾರಿಸುವುದೂ ರೂಢಿಯಲ್ಲಿದೆ.

ಕುಡುಬಿಯರ ಗುಮಟೆ ಚೀನಿಕಾಯಿ ಆಕಾರದಲ್ಲಿದ್ದರೆ, ಸಿದ್ಧಿ ಜನರ ಗುಮಟೆ ಬಿಂದಿಗೆಯ ರದಲ್ಲಿರುತ್ತದೆ. ಗುಮಟೆಗೆ ಉಡದ ಚರ್ಮವನ್ನು ಹೊದೆಸುವುದು ಸರ್ವತ್ರ ಯಲ್ಲಿದೆಯಾದರೂ ಸಿದ್ಧಿಯರು ಶಿಕಾರಿಯಲ್ಲಿ ಸಿಕ್ಕಿದ ಕಾಡುಕುರಿಯ ಚರ್ಮವನ್ನು ುವುದನ್ನು ಕಾಣಬಹುದು. ಗುಮಟೆ ಬಾರಿಸಿ ಹಾಡುತ್ತಾ ರಾತ್ರಿಯಿಡೀ ಇವರು ಯುತ್ತಾರೆ. ಸಿದ್ಧಿಯವರಲ್ಲೂ ಪುರುಷರು ಮಾತ್ರ ಗುಮಟೆ ಬಾರಿಸುತ್ತಾರೆ. ಆದರೆ ಷರು ಗುಮಟೆ ನುಡಿಸುವಾಗ ಗಂಡಸರು, ಮಹಿಳೆಯರು, ಯುವಕ, ಯುವತಿಯರು, ುಸ್ಥರು, ಮಕ್ಕಳು, ಗಂಡು ಹೆಣ್ಣು ಎಂಬ ಪ್ರಾಯಬೇಧವಿಲ್ಲದೆ ಒಟ್ಟಿಗೆ ಕುಣಿಯುವುದು ವಿಶೇಷತೆ. ಇಡೀ ದಿನ ಕಷ್ಟದ ಕಾಯಕ ಮಾಡಿ, ರಾತ್ರಿ ಊಟವಾದ ಮೇಲೆ ಹಾಡುಗಳನ್ನು ತ್ತಾ, ಗುಮಟೆ ಬಾರಿಸುವುದು ಸಿದ್ಧಿ ಜನಾಂಗದ ಒಂದು ಸಾಮುದಾಯಿಕ ಜಾನಪದ ದಾಯ. ಸಿದ್ಧಿ ಸಮಾಜದಲ್ಲಿ 'ಧಮಾಮ್ ಮತ್ತು ಡಪ್ಪ್' ಎಂಬ ಇನ್ನೆರಡು ಪ್ರಮುಖ

ಸಂಗೀತ ಸಾಧನಗಳು ಬಳಕೆಯಲ್ಲಿವೆಯಾದರೂ ಗುಮಟೆಗೂ ಇಲ್ಲಿ ಅಷ್ಟೇ ಪ್ರಾಮುಖ್ಯತೆಯನ್ನು ನೀಡಲಾಗಿದೆ.

**ಸಿದ್ಧಿಯರ ಹಾಡುಗಳು**

ಘುಗ್ಗಿ ಗೀತೆ -

1. ಯಾವ್ರೋ ರಂಗಾ ರಂಗಾನಿ ಗೋ
ಆನಿ ಉಬಾನಿ ಪುಗಡಿ, ಗಾಲ್ತಾಮುಗೋ
ತುಜೋ ಮಾಂವ ಆಸಾ, ಮನುನ ಲಜನಾಕಾಗೋ
ಆನಿ ಸುಂದರ ಪುಗಡಿ, ಗಾಲ್ತಾಮುಗೋ
ಆನಿ ನಾಜುಕ ಪುಗಡಿ ಗಾಲ್ತಾಮುಗೊ
ಗುಲಾಬಿ ಹೊನ್ನಿಚ್ಯಾ ಹೊಟ್ಯಾತ ಕಾಯ್
ಚಿರಮುರೆ, ಚಿರಮುರೆ, ಬೈಮುಂಗಾಗೋ
ಚಿರಮುರೆ, ಚಿರಮುರೆ, ಬೈಮುಂಗಾಗೋ
ಜೊಪಯ್, ಜೊಪಯ್, ಜೊಪಯ್, ಜೊಪಯ್

2. ಆಹೋ ಗೌರ, ಗೌರಮುಗೋ
ಆಹೋ ಗೌರ, ಗೌರಮುಗೋ
ಬಸುನ ಪುಗಡಿ, ಗಾಲ್ತಾಮುಗೋ
ಆಹೋ ಗೌರಾ ಗೌರಾಮುಗೋ, ಆಹೋ ಗೌರಾ ಗೌರಾಮುಗೋ
ಉಟುನ ಪುಗಡಿ ಗಾಲ್ತಾಮುಗೋ
ಪಿರುನ ಪಿರುನ, ಪುಗಡಿ, ಗಾಲ್ತಾಮುಗೋ
ಆಹೋ ಗೌರಾ ಗೌರಾಮುಗೋ, ಆಹೋ ಗೌರಾ ಗೌರಾಮುಗೋ
ಗೋಯೆಲಾ ಮನುನ, ಲಜುನಾಕಾಗೋ
ಲಜುನಾಕಾಗೋ ತಿಂಯಾ, ಲಜುನಾಕಾಗೋ

ಆಹೋ ಗೌರಾ ಗೌರಾಮುಗೋ

ಪಿರುನ,ಪಿರುನ, ಪುಗುಡಿ, ಗಾಲ್ತಾಮುಗೋ

ಜಾಂವಂಯ್, ಯೇಲಾ,ಮನುನ ಲಜುನಾಕಾಗೋ

ಮಾಮಾ ಯೇಲಾ ಮನುನ ಲಜುನಾಕಾಗೋ

ಲಜುನಾಕಾಗೋ ತಿಂಯಾ, ಲಜುನಾಕಾಗೋ

ಹೊಂಜಿಯೇಲಾ, ಮನುನ ಲಜುನಕಾಗೋ

ಲಜುನಾಕಾಗೋ ತಿಂಯಾ ಲಜುನಕಾಗೋ

ಬಸುನ ಪುಗುಡಿ, ಗಾಲ್ತಾ ಮುಗೋ

ಉಟುನ ಪುಗುಡಿ, ಗಾಲ್ತಾಮುಗೋ

ಇಬ್ಯಾನಿ ಪುಗುಡಿ, ಗಾಲ್ತಾಮುಗೋ

ಜೀರಿ ಮೀರಿ ಪುಗುಡಿ, ಗಾಲ್ತಾಮುಗೋ

ಉರಪಾಟಿ ಚೀರಪಾಟಿ, ಗಾಲ್ತಾ ಮುಗೋ

ಬಸುನ ಪುಗುಡಿ, ಗಾಲ್ತಾಮುಗೋ

ಉಟುನ ಪುಗುಡಿ, ಗಾಲ್ತಾಮುಗೋ

ಧೀರ್ ಯೇಲಾ ಮನುನ, ಲಜುನಕಾಗೋ

ಲಜುನಕಾಗೋ ತಿಂಯಾ, ಲಜುನಕಾಗೋ

ವರಸಾಚೊ ಸಣ, ಆಯ್ಲಾ ಮುಗೋ

ದೇವ್ ಯೇಲಾಗೋ ತಿಕಾ, ದೇವ್ ಯೇಲಾಗೋ

ದೇವ್ ಯೋಲಾಗೋ ತಿಕಾ, ದೇವ್ ಯೇಲಾಗೋ

ಘೋ ಯೆಲಾ ಮನುನ ಲಜುನಾಕಾಗೋ

ಪುಗಡಿ ಲಾಲಿಗೋ, ಟೀಕಾ ಪುಗಡಿ ಲಾಲಿಗೋ

3. ಚಾಕಮಾರಿ, ಚಾಕಮಾರಿ, ಚಾಕರಾಚಿ

ಕಂಬರಮೊಡ್ಲಾ ಪಾಕರಾಚಿ

ಜಾಯೆಕ, ಜಾಯೆನ, ಸಿಕಯಿಲೆ

ಖಾಕೆತ್, ಬಾಕರಿ ನಿಪಯಿಲೇ

ಯೇಗೇ ಜಾಯೇ, ಜಾಂವಾ

ಪಾನಯಾಚ್ಯಾ ವಾಟೆರ್, ಕಾಂವಾ

ಆ ಬೊಲಿಚ್ಯೆ ಫೂಲ್, ತೆವೆಲೋ ಮತ್ಯಾಕ್

ಗುಂ ಬಾಯೆ, ಗುಂ ಪಡೊಳೆಂ ಗು

ಸಿದ್ಧಿ ಜನಪದರು ಈ ಹಾಡುಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯ ಜಾನಪದ ರಾಗದಿಂದ ಹಾಡುತ್ತಾರೆ. ಈ ಕಲೆಯನ್ನು ಸಾದರಪಡಿಸುವ ಕಲಾಕಾರರು ಕ್ರಿಶ್ಚಿಯನ್, ಹಿಂದೂ, ಮುಸ್ಲಿಮ್ - ಈ ಮೂರೂ ಧರ್ಮಗಳಲ್ಲಿದ್ದಾರೆ. ಈ ಪೈಕಿ ಯಲ್ಲಾಪುರದ ಮಿಂಗೆಲ್ ಆಂತೋನಿ ಸಿದ್ಧಿ ಮತ್ತು ಪರಶುರಾಮ್ ಗಿರ್‌ಗೋಲಿ ಸಿದ್ಧಿ-ಇವರಿಗೆ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯು ಕ್ರಮಾನುಸಾರ 2001 ಮತ್ತು 2003 ವರ್ಷಗಳ 'ಗೌರವ ಜಾನಪದ ಪ್ರಶಸ್ತಿ' ನೀಡಿ ಸನ್ಮಾನಿಸಿದೆ. ಸಿದ್ಧಿ ಸಮಾಜದ ಜಾನಪದ ಗೀತೆಗಳು ಮುಂದಿನ ಪೀಳಿಗೆಗೆ ಲಭ್ಯವಾಗುವಂತೆ ಸಿದ್ಧಿ ಸಮುದಾಯದ ಫ್ರಾನ್ಸಿಸ್ ಜೆ. ಹರ್ನೊಡ್‌ಕರ್ - ಇವರು ಸಂಗ್ರಹಿಸಿದ 'ಸಿದ್ಧಿ ಲೋಕ್‌ಗೀತ್' ಎಂಬ ಪುಸ್ತಕವನ್ನು 2007 ರಲ್ಲಿ ಕೊಂಕಣಿ ಅಕಾಡೆಮಿಯು ಪ್ರಕಟಿಸಿದೆ.

**ಕೊಂಕಣಿ ಖಾರ್ವಿ ಸಮುದಾಯದಲ್ಲಿ ಗುಮಟೆ :** ಸಮಾಜದಲ್ಲಿರುವ ವಿವಿಧ ಜೀವನ ಪದ್ಧತಿಗಳಲ್ಲಿ ಮೀನುಗಾರಿಕೆಯೂ ಒಂದು ಪ್ರಾಚೀನ ಜೀವನ ಪದ್ಧತಿ. ಈ ಮೀನುಗಾರಿಕೆಯನ್ನು ಕುಲವೃತ್ತಿಯನ್ನಾಗಿ ಸ್ವೀಕರಿಸಿರುವ ಸಮುದಾಯಗಳ ಪೈಕಿ ಕರ್ನಾಟಕದಲ್ಲಿ ವಾಸ್ತವ್ಯವಿರುವ ಕೊಂಕಣಿ ಖಾರ್ವಿ ಜನಾಂಗವೂ ಒಂದು ಪ್ರಮುಖ ಪಂಗಡ. ಪ್ರಕ್ಷುಬ್ಧ ಸಮುದ್ರದಲ್ಲಿ ಅಲೆಗಳೊಂದಿಗೆ ಆಟವಾಡುತ್ತಾ ಮೀನು ಹಿಡಿಯುವುದು ಇವರಿಗೆ ಜನ್ಮದಿಂದ ಬಂದಂತಹ ಅನಿವಾರ್ಯ ಜೀವನೋಪಾಯ. ಮೀನು ಹಿಡಿಯುವುದು, ಮಾರುವುದು, ಒಣಗಿಸುವುದು, ದೋಣಿಗಳನ್ನು ತಯಾರಿಸುವುದು, ಬಲೆಗಳನ್ನು ನೇಯುವುದು ಮುಂತಾದ ಮೀನುಗಾರಿಕೆಗೆ ಸಂಬಂಧಪಟ್ಟ ವಿವಿಧ ಉದ್ಯೋಗಗಳಲ್ಲಿ ಪ್ರಾಯ ಹಾಗೂ ಲಿಂಗಭೇದವಿಲ್ಲದೆ ನಿರತರಾಗಿರುತ್ತಾರೆ. ಖಾರ್ವಿಯರು ಸಮುದ್ರ ಮಾತ್ರವಲ್ಲದೆ ನದಿಗಳಲ್ಲಿ ಕೊಳ, ಕೆರೆಗಳಲ್ಲಿಯೂ ಮೀನುಗಾರಿಕೆ ಮಾಡುತ್ತಾರೆ. ಖಾರ್ವಿ ಜನಾಂಗ ದಿನದ ಎರಡುಹೊತ್ತಿನ ಗ್ರಾಸಕ್ಕಾಗಿ ಪ್ರತಿದಿವಸ ರಾತ್ರಿ ಹಗಲುಗಳ ಪರಿವೆಯಿಲ್ಲದೆ ದುಡಿಯುವ ಬಡ, ಕಷ್ಟಜೀವಿಗಳು. ಇವರ ಮಾತೃಭಾಷೆ

ಣಿ. ಆದುದರಿಂದ ಇವರು 'ಕೊಂಕಣಿ ಖಾರ್ವಿ ಜನಾಂಗ'.

ಖಾರ್ವಿಯವರಲ್ಲಿ, ಕುಂದಾಪುರದಲ್ಲಿ ಕನ್ನಡ ಮಾತೃಭಾಷೆಯ 'ಕೆಮ್ಮಣ್ ಖಾರ್ವಿ' ಕಾರವಾರದಲ್ಲಿ 'ಹರಿಕಂತ್ರ' ಎಂಬ ಇನ್ನೆರಡು ಉಪಪಂಗಡಗಳಿವೆ. ಹಾಗೆಯೇ ಕೊಂಕಣಿ ನಾಡುವ 'ಖಂಡೆಖಾರ್ವಿ' ಎಂಬ ಮೀನುಗಾರಿಕಾ ವೃತ್ತಿಯ ಜನರೂ ಇದ್ದಾರೆ. ಆದರೆ ಣಿ ಖಾರ್ವಿ ಮತ್ತು ಈ ಪಂಗಡದವರಿಗೆ ಯಾವುದೇ ಸಂಬಂಧವಿಲ್ಲ. ಪೋರ್ಚುಗೀಸರ ಳಿಕೆಯ ಕಾಲದಲ್ಲಿ ಗೋವಾದಿಂದ ಕರ್ನಾಟಕಕ್ಕೆ ವಲಸೆ ಬಂದ ಖಾರ್ವಿಯರ ವಸತಿ ರದಿಂದ ಮಂಗಳೂರುವರೆಗಿನ ಕರಾವಳಿ ಪ್ರದೇಶಗಳಲ್ಲಿ ಇರುವುದನ್ನು ಕಾಣಬಹುದು. ದ್ರ ತೀರದಲ್ಲೆ ಗುಡಿಸಲು, ಮನೆಗಳನ್ನು ಕಟ್ಟಿ ವಾಸ ಮಾಡಿಕೊಂಡಿರುವ ಅವರ ವಾಡೆಗಳಿಗೆ ರ್ಕೇರಿ' ಎಂದೇ ಹೆಸರು.

ಸಮುದ್ರ ಅಥವಾ ಸಮುದ್ರದ ಪರಿಸರ ನೋಟಕ್ಕೆ ಸುಂದರ, ಆದರೆ ಸಮುದ್ರ ತೀರದಲ್ಲಿ ತ್ತಾ, ಸಮುದ್ರೋತ್ಪನ್ನಗಳನ್ನೇ ಅವಲಂಬಿಸಿ ಜೀವನ ಸಾಗಿಸುವ ಈ ಜನಾಂಗದ ಬದುಕು ಣ ಆತಂಕಗಳಿಂದ ಕೂಡಿದೆ.ಸಮುದ್ರದ ಉಬ್ಬರವಿಳಿತ, ಗಾಳಿ, ಮಳೆ, ಪ್ರವಾಹ, ನುಗಳು, ಸಮುದ್ರದಲ್ಲಿ ಸಂಭವಿಸುವ ಅವಘಡಗಳು, ಸಮುದ್ರದಲ್ಲಿರುವ ಕ್ರೂರ ಗಳ ಸಹವಾಸ - ಇಂತಹ ಅನನುಕೂಲಕರ ವಾತಾವಣರದಲ್ಲೂ ಮೀನು ಹಿಡಿದು, ್ಗ ಮಾರಾಟ ಮಾಡಿ - ಆ ಮುಖಾಂತರ ಗಳಿಸಿದ ಸಂಪಾದನೆಯಿಂದ ಪ್ರತೀದಿನಕ್ಕೆ ಬೇಕಾದ ರ ಸಾಮಾಗ್ರಿಗಳನ್ನು ಖರೀದಿಸಿ, ಒಂದು ರೀತಿಯ ಸಂಘರ್ಷದ ಜೀವನ ಸಾಗಿಸುತ್ತಾ ಜದ ಇತರರೊಂದಿಗೆ ಒಂದಾಗಿ ಬಾಳುತ್ತಿದ್ದಾರೆ.

ಖಾರ್ವಿಯವರು ಜೀವಿಸಿಕೊಂಡಿರುವಂಥ ಪರಿಸ್ಥಿತಿ ಅವರ ಸಾಮಾಜಿಕ ಜೀವನದ ದ್ಧಿಗೆ ಪೂರಕವಾಗಿರುವುದು ಅಲ್ಲದಿದ್ದರೂ, ಸಮಾಜದ ಇತರ ಜಾತಿ ಪಂಗಡಗಳ ಆಚರಣೆ ಮಾಡುವ ಹಬ್ಬ ಉತ್ಸವಗಳನ್ನು ಈ ಸಮಾಜದವರೂ ಆಚರಿಸುತ್ತಾರೆ. ಹುಣ್ಣಿಮೆ, ಶ್ರಾವಣ, ಕೃಷ್ಣಾಷ್ಟಮಿ, ಚೌತಿ, ಪಾಲ್ಕಿಪೂಜೆ, ದಸರಾ, ದೀಪಾವಳಿ, ತುಳಸೀ ಶಿವರಾತ್ರಿ, ಸತ್ಯನಾರಾಯಣ ಪೂಜೆ ಇತ್ಯಾದಿ ಹಬ್ಬಗಳು ಆಚರಣೆಯಲ್ಲಿವೆ. ಶಿವರಾತ್ರಿಯ ಬರುವ "ಹೋಳಿ" ಹಬ್ಬ ಖಾರ್ವಿಯವರು ಬಹಳ ಅಭಿಮಾನ, ವಿಜೃಂಭಣೆಗಳಿಂದ ಸುವ ವಿಶೇಷ ಹಬ್ಬ.

ಹೋಳಿಹಬ್ಬದ ಆಚರಣಾತ್ಮಕ ಕ್ರಿಯೆಗಳಲ್ಲಿ ಪ್ರಾದೇಶಿಕ ಮತ್ತು ಜನಾಂಗಿಕ ್ಯತೆಗಳಿರುವುದು ಸ್ವಾಭಾವಿಕ.ಹಾಗೆ, ಖಾರ್ವಿ ಜನಾಂಗವು ಹೋಳಿಯ ದಿವಸ 'ರಾವಣ ಮಾಡುವ ರೂಢಿಯನ್ನು ಪಾಲಿಸಿಕೊಂಡು ಬಂದಿದೆ. ರಾವಣನ ಆಕಾರ ಮಾಡಿ, ಅದಕ್ಕೆ ುಕ್ಕಿ ದಹನ ಮಾಡುತ್ತಾರೆ. ಕೆಲವು ಕಡೆಗಳಲ್ಲಿ ನೂರು - ಇನ್ನೂರು ತೆಂಗಿನಸೋಗೆಗಳನ್ನು ಡ್ಡಿ ಹೊತ್ತಿಸುತ್ತಾರೆ. ಹೆಚ್ಚಿನ ಕಡೆಗಳಲ್ಲಿ 'ಕಂಗು ಸುಡುವ' ರಿವಾಜು ಚಾಲ್ತಿಯಲ್ಲಿದೆ.

ಕಂಗು ಕಡಿದು ತಂದು, ಅದರ ಸುತ್ತ ಒಣಹುಲ್ಲು ಕಟ್ಟಿ, ತೆಂಗಿನ ಸೋಗೆ ಹೊದೆಸಿ, ದೇವಸ್ಥಾನದ ಎದುರಿನ ನಿರ್ದಿಷ್ಟ ಜಾಗದಲ್ಲಿ ಆ ಕಂಗನ್ನು ನೆಡುತ್ತಾರೆ. ಸಮಾಜದ ಎಲ್ಲ ಜನರೂ ಸೇರಿ ಆ ಕಂಗನ್ನು ಪೂಜಿಸುತ್ತಾರೆ. ಕಂಗಿಗೆ ಬೆಂಕಿಯಿಟ್ಟು ದಹನ ಮಾಡುವ ಸಂದರ್ಭ ಹಾಡುಗಳನ್ನು ಹಾಡುತ್ತಾ, ಗುಮಟೆ ನೃತ್ಯ ಮಾಡುವುದು ವಿಶೇಷ. ಖಾರ್ವಿಯರು ಈ ಗುಮಟೆ ನೃತ್ಯದೊಂದಿಗೆ 'ಕೋಲಾಟ' ಮತ್ತು 'ದಾಲೊರ್' ಎಂಬ ಜಾನಪದ ನೃತ್ಯವನ್ನೂ ಕುಣಿಯುತ್ತಾರೆ. ಗುಮಟೆಗಳನ್ನು ಬಾರಿಸಿ ಹಾಡುತ್ತಾ ಕುಣಿಯುವಾಗ ನೇಮಿಸಲ್ಪಟ್ಟ 'ಘಡೊ' ( ಪಾತ್ರಿ) ಆವೇಶ ಭರಿತನಾಗುತ್ತಾನೆ. ಧಾರ್ಮಿಕ ಹಿನ್ನೆಲೆಯುಳ್ಳ ಜಾನಪದ ಆಚರಣೆಯೊಂದು ದೈವತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಕ್ರಿಯೆ ಇದರಿಂದ ವ್ಯಕ್ತವಾಗುತ್ತದೆ.

ಖಾರ್ವಿ ಜನಾಂಗದ ಹೋಳಿ ಆಚರಣೆಯಲ್ಲಿ ಗುಮಟೆ ಮಾತ್ರವಲ್ಲದೆ ತಾಳ ಮತ್ತು ಚಿಕ್ಕ ಢೋಲುಗಳನ್ನು ಪೂರಕ ವಾದ್ಯಗಳಾಗಿ ಉಪಯೋಗಿಸುತ್ತಾರೆ. ಗುಮಟೆ ಬಾರಿಸುವ ಮತ್ತು ಕುಣಿತದ ರೀತಿಯಲ್ಲಿ ವೈವಿಧ್ಯತೆಗಳಿವೆ. ಗುಮಟೆ ಹಾಡುಗಳು ಜಾನಪದ ಮತ್ತು ರಾಮಾಯಣ ಮುಂತಾದ ಪುರಾಣಗಳದ್ದು. ಈ ಹಾಡುಗಳಲ್ಲಿ ಭಕ್ತಿ, ಸಾಮಾಜಿಕ, ಸಂಗತಿಗಳು, ಹಾಸ್ಯ ವಿಡಂಬನೆಗಳೂ ಅಡಕವಾಗಿವೆ. ಉದಾಹರಣೆಗೆ ಕೆಲವು ಹಾಡುಗಳನ್ನು ನೋಡಬಹುದು.

1. ಆದಿಶಕ್ತಿ ಮಹಾಮಾಯಿ ರವುಳುನಾಥ ಮಹಾಮಾಯಿ
ಆದಿಶಕ್ತಿ ಮಹಾಮಾಯಿ ರವುಳುನಾಥ ಮಹಾಮಾಯಿ
ಶೃಂಗೇರಿ ಶಾರದಾಂಬೆ ನಮನುಗಾ ಕರಾಗಾ
ಶೃಂಗೇರಿ ಶಾರದಾಂಬೆ ನಮಾನುಗಾ ಕರಾಗಾ
ಸಕಲ ವಿಘ್ನನಿವಾರಕ ಸಕಲ ಸಿದ್ಧಿ ವಿನಾಯಕ
ಸಕಲ ವಿಘ್ನ ನಿವಾರಕ ಸಕಲ ಸಿದ್ಧಿ ವಿನಾಯಕ
ಶರಣು ಕರತಾ ನಾಚುತಾ ಶರಣು ಶರಣು ಗಾಯೆಗಾ
ಶರಣು ಕರತಾ ನಾಚುತಾ ಶರಣು ಶರಣು ಗಾಯೆಗಾ
ಗುಮ್ಟೆ ಮಾಂಡು ವಾಜುತಾ ದೇವಾಲೆ ಮುಕಾರು ನಾಚುಗಾ (4)
ತಳ ತಳ ರಸತಳ ನಮನುಗಾ ಖೆಳೆಗಾ (4)

2. ಅಮ್ಮಿ ನಾಚ್ಯಾತು ಅಮ್ಮಿ ಉಡ್ಡಾತ್ತು
ಅಮ್ಮಿ ನಾಚಯಾ ಹೋಳಿಕು

ಅಮ್ಮಿ ರಾಮ್ ದೇವಾ ನಾವು ಗೆಂವ್ಪೂಯಾ

ಆಮ್ಮಿ ತುಳಸಿ ಮಾಮ್ಮಾಯಿಕು ಮಾಗುಯಾ

ಆಮ್ಮಿ ನಾಚ್ಯಾತ್ತು

ಆಮ್ಮಿ ಸಿಗ್ಮೇ ಪೊರ್ಬ್ಬೆಕು ನಾಚುಯಾ

ಆಮ್ಮಿ ಗಾರಾನು ಗಾರಾ ನಾಚುಯಾ

ಆಮ್ಮಿ ರಂಗುನೆ ಗಾಲುನು ಗೇವುಯಾ

ಆಮ್ಮಿ ತೆಮ್ಕರೆ ರಂಗು ಗಾಲುಯಾ

ಆಮ್ಮಿ ನಾಚ್ಯಾತ್ತು

ಆಮ್ಮಿ ಗುಮ್ಟೆರೆ ಗೇವುನು ಕೇಳುಯಾ

ಆಮ್ಮಿ ತುಣಯಾಚೆ ಕೇಳು ದೇಕ್ಕಯಾ

ಆಮ್ಮಿ ದೇವಳಕ್ಕು ವಾಚ್ಯಾನು ನಾಚುಯಾ

ಆಮ್ಮಿ ನಾಚ್ಯಾತ್ತು ಉಡ್ಡಾತ್ತು ಕೇಳಯಾ

3. 1. ಹಾಲಾಗೋ ವಾರೆಚೆ ಸುಳಿಗೋ ಸುಟಲಿ

ಹೆ ಗಾವಂಚೆ ಪೊರಿಕು ಅಮಚೆ ಕಸಿ ನಟಲಿ

2. ಕಾರವಾರಚೆ ದಾಂಡಿ ದಾಂಡಿವರ ಬಸ್ತಾ

ಪ್ರಕಾಶ ಪಡ್ಲ ಸಗ್ಲೆ ದರಿಯಾ ಮೋದಿ

3. ಜಾಡು ಜೋಡು ಕರಿನಾರು ಗರಿಗೇನು

ಪಾನಿಯಾಲ ಗೆಲೇಗಾ

ಪಾನಿಯಾ ಗೆಲ್ಲೇಕಣೆ ತಯಜಾಲಿ ಸಾಂಜ

ಭಟ್ಕಳಚೆ ಬಂದ್ರರು ಲಾಯಲಾ ನಿಸಾಣ್

4 ಬಂಗಾರು ಸಿಂಗಾರು ದೇಲುನ ತುಲಾ

ಜಾಂಗೇಚಿ ವರ್ನೆ ಜರಾಗೇ ಗೋಮಜಾ

ಖಾರ್ವಿ ಸಮಾಜದಲ್ಲಿ ಜಾನಪದ ಕಲೆ ಉಳಿಸಲು ನೀಡಿದ ಸೇವೆಗಾಗಿ ಕುಂದಾಪುರ ಖಾರ್ವಿಕೇರಿಯ ವಿದ್ಯಾರಂಗ ಮಿತ್ರ ಮಂಡಳಿಗೆ 2001 ವರ್ಷದ ವಿಶೇಷ ಪ್ರಶಸ್ತಿ ನೀಡಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯು ಗೌರವಿಸಿದೆ. ಹಾಗೆಯೇ, ಸುರೇಶ್ ತಾಂಡೇಲ್-ಇವರ 'ಖಾರ್ವಿ ಲೋಕ್ ಗೀತ್' ಎಂಬ ಜಾನಪದ ಹಾಡುಗಳ ಸಂಗ್ರಹದ ಪುಸ್ತಕವನ್ನೂ ಅಕಾಡೆಮಿ ಪ್ರಕಟಿಸಿದೆ. ಅಲ್ಲದೆ, ಕುಂದಾಪರುದ ಖಾರ್ವಿ ಸಮುದಾಯದ ಶ್ರೀ ನಾರಾಯಣ ಖಾರ್ವಿಯವರಿಗೆ 2006-2007 ಹಾಗೂ ಶ್ರೀ ಚಂದ್ರಶೇಖರ ಖಾರ್ವಿಯವರಿಗೆ 2007-08ನೇ ವರ್ಷದ 'ಗೌರವ ಜಾನಪದ ಪ್ರಶಸ್ತಿ' ನೀಡಿ ಅಕಾಡೆಮಿಯು ಸನ್ಮಾನಿಸಿದೆ.

**ಮರಾಠಿ ಸಮುದಾಯದಲ್ಲಿ ಗುಮಟೆ :** ಗೋವಾ ಮಹಾರಾಷ್ಟ್ರ ಪ್ರದೇಶಗಳಿಂದ ವಲಸೆ ಬಂದು ಕರ್ನಾಟಕ ಕರಾವಳಿಯ ಊರುಗಳಲ್ಲಿ ನೆಲೆನಿಂತ ಇನ್ನೊಂದು ಸಮುದಾಯ 'ಮರಾಠಿ ಜನಾಂಗ'. ಶಿವ ಮತ್ತು ಶಕ್ತಿ ಆರಾಧಕರಾಗಿರುವ ಮರಾಠಿಯರು ಕರ್ನಾಟಕದ ಇತರ ಹಿಂದೂ ಧರ್ಮೀಯರು ಆಚರಣೆ ಮಾಡುವಂತಹ ಚೌತಿ, ದೀಪಾವಳಿ, ನವರಾತ್ರಿ, ಶಿವರಾತ್ರಿ .......... ಹಬ್ಬಗಳನ್ನು ಈ ಜನಾಂಗದವರೂ ಆಚರಣೆ ಮಾಡುತ್ತಾರೆ. ಒಂದು ಕಟ್ಟೆ ಕಟ್ಟಿ , ಅದರಲ್ಲಿ ಭವಾನಿ ದೇವಿಯ ಪೀಠ ರಚಿಸಿ, ದೇವಿಯನ್ನು ಆರಾಧಿಸುವುದು ಇವರ ಪರಿಪಾಠ. "ಗೋಂದೊಳು ಪೂಜೆ" ದೇವಿಗೆ ಸಮರ್ಪಣೆಗೊಳ್ಳುವುದು ಈ ಸಮಾಜದ ಒಂದು ವಿಶೇಷ ಪೂಜೆ. ಈ ಪೂಜೆಯ ಸಂದರ್ಭದಲ್ಲಿ ಉಪಯೋಗಿಸಲ್ಪಡುವ ಏಕಮಾತ್ರ ವಾದ್ಯ 'ಗುಮಟೆ'

ಹೋಳಿ ಕಾಮದಹನ ಭಾರತದಾದ್ಯಂತ ಆಚರಿಸಲ್ಪಡುವ ಹಬ್ಬ. ಹಲವು ಪ್ರದೇಶಗಳಲ್ಲಿ ಪಂಥ, ಧರ್ಮ, ಪ್ರಾಯ, ಲಿಂಗ ಭೇದವಿಲ್ಲದೆ ರಂಗುಹಾಕಿ, ರಂಗಿನ ನೀರು ಎರಚಿ ಹೋಳಿ ಆಚರಿಸುವುದನ್ನು ಕಾಣಬಹುದು. ಆದರೆ, ಕುಡುಬಿ ಜನಾಂಗದವರ ರೀತಿಯಲ್ಲೆ, ಗುಮಟೆ ಬಾರಿಸಿ, ಹಾಡುಹಾಡಿ, ಕುಣಿಯುತ್ತಾ ಹೋಳಿ ಆಚರಣೆ ಮಾಡುವ ಇನ್ನೊಂದು ದೊಡ್ಡ ಸಮುದಾಯ ಮರಾಠಿ ಜನಾಂಗ. ಧಾರ್ಮಿಕ ಆಚರಣೆಯು ವಿಕಾಸಗೊಂಡು, ಹೋಳಿ ನೃತ್ಯದ ರೂಪ ಪಡೆದಿರುವುದು ಈ ಸಮಾಜದಲ್ಲೂ ವ್ಯಕ್ತವಾಗುತ್ತದೆ. ಇವರ ಮಾತೃಭಾಷೆ ಮರಾಠಿ. ಇವರ ಹೋಳಿ ನೃತ್ಯದಲ್ಲಿ ಪ್ರಧಾನವಾಗಿ ಉಪಯೋಗವಾಗುವ ಸಂಗೀತವಾದ್ಯ ಗುಮಟೆ ಆದುದರಿಂದ ಈ ಜಾನಪದ ನೃತ್ಯಕ್ಕೆ 'ಗುಮಟೆ ನೃತ್ಯ' ಎಂದೇ ಹೆಸರು.

ಮರಾಠಿ ಜನಪದರು, ಶಿವರಾತ್ರಿಯ ನಂತರ ಬರುವ ಫಾಲ್ಗುಣ ಶುಕ್ಲ ಪಕ್ಷದ ಅಷ್ಟಮಿ ಅಥವಾ ದಶಮಿಯಿಂದ 'ಶಿಗ್ಮ್ಯಾ ಪುನವ್' (ಹುಣ್ಣಿಮೆ) ವರೆಗೆ ಈ ಗುಮಟೆ ನೃತ್ಯವಾಡುತ್ತಾರೆ. ಕುಡುಬಿಯರಂತೆಯೇ ಈ ಜನಾಂಗದವರೂ ಬಹಳ ಕಟ್ಟುನಿಟ್ಟಿನಿಂದ 'ಕೂಡುಕಟ್ಟು' ಜೀವನಕ್ರಮವನ್ನು ಪಾಲಿಸಿ, ಸಂಘಟನಾಯುಕ್ತ ಜೀವನ ನಡೆಸುತ್ತಾರೆ. ಕೂಡುಕಟ್ಟಿಗೆ ಒಬ್ಬ ಗುರಿಕಾರನಿರುತ್ತಾನೆ. ಗುರಿಕಾರನ ಅಂಗಳದಲ್ಲಿ, ಯಾ ಕೂಡುಕಟ್ಟಿನ ಜನತೆ ನಿರ್ಣಯಿಸಿದ ಜಾಗದಲ್ಲಿ ಈ ಕುಣಿತ ಜರಗುತ್ತದೆ. ಈ ಜಾಗದಲ್ಲಿ ಒಂದು ದೊಡ್ಡ ತುಳಸೀ ಕಟ್ಟೆಯಿರುತ್ತದೆ.

ಟ್ಟೆಗೆ 'ತುಳಜಾ ಭವಾನಿ ಕಟ್ಟೆ' ಅಥವಾ 'ಭಸ್ಮೇಶ್ವರಿ ಕಟ್ಟೆ' ಅಂತ ಹೆಸರು. ಪದ್ಧತಿ ಹುಣ್ಣಿಮೆಯ ಏಳು ಅಥವಾ ಐದು ದಿವಸಗಳ ಮುಂಚಿನ ದಿನ, ಸೂರ್ಯೋದಯಕ್ಕೆ ೨ ಸೂರ್ಯಾಸ್ತಮಾನ ಸಮಯ 'ನಾರ್ಲ್ ಚಡಂವ್ಚೆ' (ತೆಂಗಿನಕಾಯಿ ಏರಿಸುವುದು) ಕ್ರಮವಿದೆ. ನಿಶ್ಚಿತ ಸಮಯದಲ್ಲಿ ಕೂಡುಕಟ್ಟಿನ ಜನರು ಒಟ್ಟು ಸೇರಿದ ಮೇಲೆ ಗುರಿಕಾರ ೀ ಕಟ್ಟೆ ಹತ್ತಿರ ಪೂಜೆಗಾಗಿ ತಯಾರಾಗುತ್ತಾನೆ. ಸಿಪ್ಪೆ ಸಹಿತವಿರುವ ಒಂದು ಕಾಯಿಯನ್ನು ಹೂವುಗಳಿಂದ ಸುಂದರವಾಗಿ ಶೃಂಗರಿಸಿ, ಧೂಪ ದೀಪಗಳಿಂದ ಪೂಜಿಸಿ, ವರೆಲ್ಲಾ ಆ ತೆಂಗಿನಕಾಯಿ ಮುಟ್ಟಿ ತುಳಸೀ ಕಟ್ಟೆಯಲ್ಲಿಡುತ್ತಾರೆ. ಕೆಲವು ಕಡೆಗಳಲ್ಲಿ ುಸಿದ 'ದರ್ಶನ ಪಾತ್ರಿ' ಯ ಮೇಲೆ ದೇವೀ ದರ್ಶನ ಅವಾಹಿಸಿ, ಆತನ ಕೈಯಿಂದ ಕಾಯಿ ಏರಿಸುವ ಪರಂಪರೆಯೂ ಇದೆ. ಆ ನಂತರ ಗುಮಟೆ ಮತ್ತು ತಾಳಗಳನ್ನು ಬದ್ಧ ರೀತಿಯಲ್ಲಿ ಬಾರಿಸುತ್ತಾ ಹಾಡುಹಾಡಿ ತುಳಸೀ ಕಟ್ಟೆಗೆ ಸುತ್ತು ಹಾಕುತ್ತಾ ುತ್ತಾರೆ.

ತೆಂಗಿನಕಾಯಿ ಏರಿಸಿದ ಮರುದಿವಸದಿಂದ, ಹೋಳಿ ಕುಣಿತದೊಂದಿಗೆ ಊರು ತಿರುಗಾಟ ಭವಾಗುತ್ತದೆ. ಕುಣಿತಗಾರರು ತಲೆಗೆ ಬಿಳಿ ರುಮಾಲು, ಕಪ್ಪು ಚಲ್ಲಣ, ಗುಲಾಬಿ ವರ್ಣದ ಂಗಿ, ಬೆನ್ನು ಮುಚ್ಚುವಂತೆ ರಂಗಿನ ಶಾಲು, ಎದೆಯ ಮೇಲೆ ಹಳದಿ ಬಣ್ಣದ ಶಾಲು, ಕ್ಕೆ ಸೊಂಟಪಟ್ಟಿ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ವಿಶಿಷ್ಟ ರೀತಿಯಲ್ಲಿ ಶೃಂಗರಿಸಿಕೊಳ್ಳುತ್ತಾರೆ. ೀಳದಲ್ಲಿ ಗುಮಟೆ ಬಾರಿಸುತ್ತಾರೆ ಮತ್ತು ಹಾಡಿನೊಂದಿಗೆ ಕುಣಿಯುತ್ತಾರೆ. ಇವರ ತಕ್ಕೆ 'ಖೇಳೆ' ಎಂದು ಹೆಸರು. ಖೇಳೆ ಮೇಳ ಸ್ವಜಾತಿ ಬಾಂಧವರಲ್ಲಿ ತಲುಪಿದಾಗ ಆ ು ಸುಮಂಗಲೆಯರು ಖೇಳೆಯವರ ಕಾಲು ತೊಳೆದು, ಹಣೆಗೆ ಕುಂಕುಮದ ತಿಲಕವಿಟ್ಟು ಸುತ್ತಾರೆ. ಗುಮಟೆ ನೃತ್ಯಗಾರರು ಆಡುವಾಗ ಚಿಕ್ಕ ಮಕ್ಕಳನ್ನು ಹೆಗಲಿಗೇರಿಸಿಕೊಂಡು ರ ಕ್ರಮ ಮರಾಠಿ ಸಮಾಜದಲ್ಲಿಯೂ ವಾಡಿಕೆಯಲ್ಲಿದೆ. ಇದರಿಂದಾಗಿ ಮಕ್ಕಳ ಭಯ ಣೆಯಾಗಿ, ವರ್ಷಪೂರ್ತಿ ಆರೋಗ್ಯಪೂರ್ಣವಾಗಿರುತ್ತಾರೆ ಎಂಬ ನಂಬಿಕೆಯಿದೆ. ಮನೆಯ ಮಾನ ಖೇಳೆಯವರಿಗೆ ತೆಂಗಿನಕಾಯಿ, ಅಕ್ಕಿ, ವೀಳ್ಯ ಹಾಗೂ ಆರ್ಥಿಕರೂಪದ ಗಳನ್ನಿತ್ತು, ಗೌರವಿಸುತ್ತಾನೆ. ಖೇಳೆಯವರು ದೇವಿಯನ್ನು ಪ್ರಾರ್ಥಿಸಿ, ಆ ಕುಟುಂಬಕ್ಕೆ ರುದಾಗಲೆಂದು ಹರಸಿ, ಕುಂಕುಮ ಪ್ರಸಾದವನ್ನು ನೀಡುತ್ತಾರೆ. ಯಜಮಾನ ಭಕ್ತಿಯಿಂದ ಸ್ವೀಕಾರ ಮಾಡುತ್ತಾನೆ.

ಹೀಗೆ ಊರೆಲ್ಲಾ ಆಡಿಯಾದ ಮೇಲೆ, ಹೋಳಿಯ ದಿವಸ ಗುರಿಕಾರನ ಅಂಗಳವನ್ನು ುತ್ತಾರೆ. ಅಲ್ಲಿರುವ ತುಳಸೀಕಟ್ಟೆಯ ಸುತ್ತ ಗುಮಟೆ ಬಾರಿಸುತ್ತಾ, ಹಾಡುಗಳನ್ನು ತ್ತಾ ಕುಣಿಯುತ್ತಾರೆ. ಒಟ್ಟಿಗೇ ಕೋಲಾಟವನ್ನೂ ಆಡುತ್ತಾರಾದರೂ, ಹೋಳಿ ನೃತ್ಯದಲ್ಲಿ ಟೆಗಳಿಗೇ ಪ್ರಾತಿನಿಧ್ಯ, ಪ್ರಾಮುಖ್ಯತೆ ಜಾಸ್ತಿ. ಈ ಸಂದರ್ಭದಲ್ಲಿ ಪಾತ್ರಿಯ ಮೇಲೆ ದರ್ಶನವಾಗಿ, ಹೋಳಿ ಆಚರಣೆಯಲ್ಲಿ ತಿಳಿಯದೆ ಘಟಿಸಿದ ತಪ್ಪುಗಳನ್ನು ಕ್ಷಮಿಸಲು

ಹಾಗೂ ಮುಂದಿನ ವರ್ಷಗಳಲ್ಲಿಯೂ ಹೋಳಿಯನ್ನು ಒಳ್ಳೆಯ ರೀತಿಯಲ್ಲಿ ನಡೆಸಿಕೊಂಡು ಬರಲು ಖೇಳೆಯವರು ಕೃಪೆಯನ್ನು ಬೇಡುತ್ತಾರೆ. ನಂತರ ವೇಷ ಭೂಷಣ ಕಳಚುವ ತಯಾರಿ ನಡೆಯುತ್ತದೆ. ಈ ಸಂದರ್ಭ ಒಕುಳಿ ನೀರನ್ನು ತಲೆಯ ಮೇಲಿಂದ ಮೈಮೇಲೆ ಹೊಯ್ದುಕೊಳ್ಳುತ್ತಾರೆ ಮತ್ತು ಸ್ನಾನಕ್ಕೆ ತೆರಳುತ್ತಾರೆ. ಸ್ನಾನವಾಗಿ ಹಿಂದಿರುಗುವಾಗ ಮುತ್ತೈದೆಯರು ಬೈಹುಲ್ಲು ಹಾಸಿ ಬೆಂಕಿಯಿಕ್ಕುತ್ತಾರೆ. ಖೇಳೆಯವರು ಆ ಬೆಂಕಿಯ ಎದುರು ಸಾಲುಕಟ್ಟಿ ನಿಲ್ಲುತ್ತಾರೆ. ಸುಮಂಗಲೆಯೊಬ್ಬಳು ಖೇಳೆಯವರಿಗೆ ವೀಳ್ಯದೆಲೆಯಲ್ಲಿ ಬತ್ತಿ ಹೊತ್ತಿಸಿ ಆರತಿ ಮಾಡುತ್ತಾಳೆ. ಖೇಳೆಯವರು ಬೆಂಕಿ ಹಾಯ್ದು ಈ ಕಡೆಗೆ ಬರುತ್ತಾರೆ. ಇದು ಕಾಮದಹನದ ಸಂಕೇತ.

ಕೊನೆಗೆ ತುಳಸೀ ಕಟ್ಟೆಯ ಮೇಲೆ 'ಕಳಶ' ವಿಟ್ಟು ದೇವಿಗೆ ಪೂಜೆ ಮಾಡುತ್ತಾರೆ. ಐದು ತೆಂಗಿನಕಾಯಿ ಒಡೆದು ದೇವಿಗೆ ಸಮರ್ಪಿಸುವ ಕ್ರಮವಿದೆ. ನಂತರ ಸಾಮೂಹಿಕ ಭೋಜನ ಮಾಡಿ ಹೋಳಿಯ ಆಚರಣೆ ಸಮಾಪ್ತಿಗೊಳ್ಳುತ್ತದೆ.

ಹೋಳಿ ಹಬ್ಬದ ವಿಶೇಷ ಸಂಗೀತವಾದ್ಯ 'ಗಮಟೆ' ಬಾರಿಸುವಾಗ ರಾಮಾಯಣ ಕಥಾ ಸನ್ನಿವೇಶಗಳ ಸಂದರ್ಭಗಳ ಹಾಡುಗಳನ್ನು ಹಾಡುವುದನ್ನು ಕಾಣಬಹುದು. ರಾಮಾಯಣದ ಈ ಒಂದು ಹಾಡು ಮರಾಠಿಗರ ಗುಮಟೆ ಹಾಡಿಗೆ ಉದಾಹರಣೆ -

ಮಾರೀಚ ದೈ ತೋ ... ಹೊ... ರೇ ।

ಮಾರೀಚ ದೈತೋ ....ಮೃಗವೋಚ

ಪಾಂಚೋ ವಟಿ ಹೋನಾ ಮದಿ ॥ 1 ॥

ಪಾಂಚೋವಟಿ ಹೋನಾ ಮದಿ ಮೈಕ

ಮೈರಗು ಬೋಳೊಯ್ತಾ

ಸಿತೆನಿ ದೇಖೋನಿ ಹೋ .. ರೇ ।

ಸಿತೆನಿ ದೇಖೋನಿ ಭ್ರಾಮಿ ಜಾವೋ ರಾಮ

ಕೂಡೆರು ಬೋಳೋಯ್ತಾ ॥ 2 ॥

ಸಿತೆಚ ವಚನಿರೆ ಹೊ ... ರೇ

ಸಿತೆಚ ವಚನಿರೆ ಹೈಕನೂರೆ ರಾಮಚಂದ್ರಕೋ

ಕೋಪೋ ಜಾಲೆ ।

ರಾಮಚಂದ್ರಕೋ ಕೋಪೋ ಜಾಲೇ ಧನುಸು

ಾಣೇ ಕೋ ಧರೆಲಾಂ ।
ನುಸು ಬಾಣೆಕು ಧರೆಲು ರೇ ಮೃಗಜ
ಂಬಲು ಧರೆಲಾಂ ॥ 3 ॥
ಕ್ಲಿ ಗೇಲೇರೆ ಹೊ... ರೇ ।
ಕ್ಲಿ ಗೇಲೇರೆ ಮೃಗಚ ಪಾಟಿ ತುಮಿ ಜಾವೊ
ಾವ ಸುಜಾಲೇ
ೂಜ ಬಾವಾಚ ಎಂಗೇ ಎವುಜುನು ಸಿತೆಲೇ
ುಃಖು ಚಿಂತೆ ಕೇಳಾ ॥

ೕರಾಮಚಂದ್ರ ವನವಾಸದಲ್ಲಿರುವಾಗ ದೈತ್ಯ ಮಾರೀಚನು ಚಿನ್ನದ ಹರಿಣ ರೂಪದ ಾಮೃಗವಾಗಿ ಸೀತೆಯೆದುರು ಕುಣಿಯುತ್ತಾನೆ. ಸೀತೆಯು ಆ ಮೃಗವನ್ನು ಹಿಡಿದು ಂತೆ ರಾಮನಲ್ಲಿ ಬೇಡುತ್ತಾಳೆ. ಹರಿಣದ ಬೇಟೆಗೆ ರಾಮ ತೆರಳುವ ಹಿಂದಿನಿಂದ ನೂ ಹೋಗಬೇಕಾಗುತ್ತದೆ. ಒಬ್ಬಳೇ ಉಳಿಯುವ ಸೀತೆ ದುಃಖ ಅನುಭವಿಸುವ ಶ - ಈ ಹಾಡಿನ ಸಾರಾಂಶ. ಇಂತಹ ಹಾಡುಗಳನ್ನು ಅರ್ಥ ಮಾಡಿಕೊಳ್ಳುವುದು ಸುಲಭಸಾಧ್ಯವಿಲ್ಲ. ಆದರೆ ಅಕ್ಷರಜ್ಞಾನವಿಲ್ಲದ ಅಶಿಕ್ಷಿತ ಜನ, ಪುರಾಣದ ಈ ಳನ್ನು, ಬಾಯಿಂದ ಬಾಯಿಗೆ ಮೌಖಿಕವಾಗಿ ಉಳಿಸಿಕೊಂಡು ಗುಮಟೆ ನೃತ್ಯಕ್ಕೆ ಸಿಕೊಂಡು ಬಂದದ್ದು ಜನಪದರ ಜ್ಞಾನ ಮತ್ತು ವಿಶೇಷ ಜಾಣ್ಮೆಗಳಿಗೆ ನಿದರ್ಶನ.

**ಒಕ್ಕಲಿಗ ಸಮುದಾಯದಲ್ಲಿ ಗುಮಟೆ :** ಹಾಲಕ್ಕಿ ಒಕ್ಕಲಿಗ ಜನಾಂಗ ಉತ್ತರಕನ್ನಡ ಕಾರವಾರ, ಕುಮಟಾ, ಅಂಕೋಲಾ, ಹೊನ್ನಾವರ, ಗೋಕರ್ಣ- ಈ ಪ್ರದೇಶಗಳಲ್ಲಿ ರುವ ಒಂದು ವಿಶಿಷ್ಟ ಸಮುದಾಯ. ಸಂಪ್ರದಾಯಬದ್ಧವಾಗಿ ಜೀವಿಸುತ್ತಾ, ುಿಂದ ಪೀಳಿಗೆಗೆ ತಮ್ಮ ಆಚಾರವಿಚಾರಗಳನ್ನು ಕಾಯ್ದುಕೊಂಡು ಬಂದಿರುವಂತಹ ುವರು ದುರ್ಬಲ ಶೋಷಿತವರ್ಗ. ಬುಡಕಟ್ಟು ಜನಾಂಗದ ಎಲ್ಲಾ ಕುರುಹುಗಳೂ ಒಕ್ಕಲಿಗರ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡು ಬರುತ್ತವೆ. ಈ ಜನಾಂಗದ ುರು ಕೊರಳ ತುಂಬಾ ಮಣಿಸರ ಧರಿಸುತ್ತಾರೆ. ರವಕೆ ಧರಿಸುವ ಕ್ರಮವಿಲ್ಲ ಆದರೂ ಹೆಣ್ಣುಮಕ್ಕಳು ಪ್ರದರ್ಶಿಸುವ ಮೈಗಿಂತಲೂ ಕಡಿಮೆ ಅಂಗಪ್ರದರ್ಶನ ಆಗುವ ದೆ ಮುಚ್ಚಿ, ಸೆರಗನ್ನು ಕೊರಳ ಹತ್ತಿರ ಸಿಕ್ಕಿಸಿಕೊಂಡು ಸೀರೆ ಉಡುತ್ತಾರೆ. ತಮ್ಮದೇ ಮಾಜಿಕ ಆಡಳಿತ ಪದ್ಧತಿಯನ್ನು ಇವತ್ತಿಗೂ ಪಾಲಿಸಿಕೊಂಡು ಬಂದಿರುವ ಹಾಲಕ್ಕಿ ವು ಉತ್ತರ ಕನ್ನಡದಲ್ಲಿ ಏಳು ಸೀಮೆಗಳನ್ನು ಮಾಡಿಕೊಂಡು, ಆ ಸೀಮೆಗಳಿಗೆ

ಒಂದೊಂದು ಹೆಸರು ಕೊಟ್ಟು, ಪ್ರತಿಯೊಂದು ಕುಟುಂಬವೂ ಆ ಸೀಮೆಯು ಆಡಳಿತಕ್ಕೊಳಪಡುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಕೆಲವು ವಾಡೆ ಅಥವಾ ಕೆಲವು ಮನೆಗಳ ಸಮೂಹ ಸೇರಿ ಒಂದು 'ಕೊಪ್ಪ' ವಾಗುತ್ತದೆ. ಇಂತಹ ಹಲವು ಕೊಪ್ಪಗಳ ಸಮೂಹ 'ಸೀಮೆ' ಎನಿಸುತ್ತದೆ. ಪ್ರತಿಯೊಂದು ಸೀಮೆಯಲ್ಲೂ ಗುರು, ಅರಸು, ಪ್ರಧಾನಿ, ಸೀಮೆ ಬುದವಂತ - ಅಧಿಕಾರಿಗಳಾಗಿದ್ದರೆ ಕೊಪ್ಪಗಳಲ್ಲೂ ಇದೇ ರೀತಿಯ ಅಧಿಕಾರ ಹೊಂದಿದವರು ಸಾಮಾಜಿಕ ಮತ್ತು ಧಾರ್ಮಿಕ ಆಡಳಿತ ನಡೆಸುತ್ತಾರೆ. ಇವರ ಮಾತೃಭಾಷೆ ಕನ್ನಡ ಮತ್ತು ಪ್ರಧಾನ ಜೀವನೋಪಾಯ ಕೃಷಿ.

ಹಾಲಕ್ಕಿ ಜನಾಂಗದ ಸಾಮಾಜಿಕ ಮತ್ತು ಧಾರ್ಮಿಕ ಜೀವನ ಒಂದಕ್ಕೊಂದು ಪೂರಕವಾಗಿವೆ. ಫಾಲ್ಗುಣ ದಶಮಿಯಿಂದ ಹೋಳಿ ಹುಣ್ಣಿಮೆ ವರೆಗೆ 'ಸುಗ್ಗಿ ಹಬ್ಬ'ವನ್ನು ಬಹಳ ವಿಜೃಂಭಣೆ, ವೈಭವಗಳಿಂದ ಈ ಜನಾಂಗದವರು ಆಚರಣೆ ಮಾಡುತ್ತಾರೆ. ಸುಗ್ಗಿ ಹಬ್ಬವೆಂದರೆ - ವಿವಿಧ ಆಚರಣೆಗಳು, ವಿವಿಧ ಕುಣಿತಗಳು, ಜಾನಪದ ಹಾಡುಗಳು, ಪ್ರಾಚೀನ-ರಂಗಭೂಮಿಯನ್ನು ಕಣ್ಣೆದುರು ನಿಲ್ಲಿಸುವಂತಹ ನೃತ್ಯಗಳು ಮತ್ತು 'ಹಗರಣ' ಎಂಬ ದೃಶ್ಯಶ್ರವ್ಯ ಕಲೆ ಸಹಿತ ಇದೊಂದು ಸಂಕೀರ್ಣ ರೀತಿಯ ಆರಾಧನಾ ಪ್ರಕಾರ. ಈ 'ಹಗರಣ' ಕಲಾ ಈ ಪ್ರಕಾರದಲ್ಲಿ ಪ್ರತಿಯೊಬ್ಬ ಪುರುಷನೂ ಒಂದಿಲ್ಲೊಂದು ವೇಷ ಧರಿಸಿ ಕೊಪ್ಪದ ತುಳಸೀ ಕಟ್ಟೆಯ ಎದುರು 'ಜಟ್ಟಿಗ' ದೈವದ ಆರಾಧನೆ ಮಾಡಿ, ಹಿರಿಯರಿಂದ ಆಶೀರ್ವಾದ ಪಡೆದು, ಪೂರ್ವ ನಿಶ್ಚಿತ ವಿಶಾಲ ಮೈದಾನದಲ್ಲಿ ಒಟ್ಟು ಸೇರುತ್ತಾರೆ. ಈ ಜಾಗದಲ್ಲಿ 'ಹಗರಣ' ನೋಡಲು ನೆರೆಯ ಊರುಗಳಿಂದ ಸಾವಿರಗಟ್ಲೆ ಜನ ಸೇರುತ್ತಾರೆ. ದಿನವಿಡೀ ನಡೆಯುವ ಈ 'ಹಗರಣ' ಆಟದಲ್ಲಿ ಹಿಮ್ಮೇಳದಲ್ಲಿ ಉಪಯೋಗವಾಗುವ ಪ್ರಧಾನ ವಾದ್ಯ 'ಗುಮಟೆ'

**ಗುಮಟೆಪಾಂಗ್** : ಹಾಲಕ್ಕಿ ಸಮುದಾಯದ ಹಾಡುಗಾರಿಕೆ, ವಾದನ ಮತ್ತು ನರ್ತನಗಳ ಒಂದು ಸಮೂಹಗಾನ 'ಗಮಟೆ ಪಾಂಗ್'. ಒಂದು ರೀತಿಯಲ್ಲಿ ಗ್ರಾಮೀಣ ಸಂಗೀತ ಗೋಷ್ಠಿ ಅನ್ನಬಹುದು. ಮದ್ದಳೆಯ ಆಕಾರದಲ್ಲಿ, ಸಾಧಾರಣ ನಾಲ್ಕು ಅಡಿ ಉದ್ದವಿರುವ ಇವರ ಗುಮಟೆಗೆ ಉಡದ ಅಥವಾ ಕಾನಕುರಿಯ ಚರ್ಮ ಮುಚ್ಚಿರುತ್ತಾರೆ. ಈ ಜಾನಪದ ಕಲಾ ಪ್ರದರ್ಶನದಲ್ಲಿ ಕನಿಷ್ಠ ನಾಲ್ಕು ಜನ ಗುಮಟೆ ವಾದಕರಿರುತ್ತಾರೆ. ಇದರೊಂದಿಗೆ 'ಕಚಾಳ' ಎಂಬ ತಾಳ, ಹಾಗೆಯೇ 'ಕೂಚ' ಎಂಬ ಒಬ್ಬ ನರ್ತಕನೂ ಇರುತ್ತಾನೆ. ರಾತ್ರಿ ವಿರಾಮದ ವೇಳೆಯಲ್ಲಿ ಸಾಮಾನ್ಯವಾಗಿ ಕೊಪ್ಪದ ತುಳಸೀ ಮನೆಯ ಅಂಗಳದಲ್ಲಿ ಸುಗ್ಗಿಯ ಸಂದರ್ಭ ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಕಾರ್ತಿಕೋತ್ಸವ, ಹುಲಿಹಬ್ಬ, ಯುಗಾದಿ, ದೇವಕಾರ್ಯ ಮುಂತಾದ ಹಬ್ಬಗಳ ಸಂದರ್ಭಗಳಲ್ಲಿಯೂ ಪ್ರದರ್ಶನ ನಡೆಸುವುದುಂಟು. ಕೆಲವು ವಿಶೇಷ ಸಂದರ್ಭಗಳಲ್ಲಿ ಹಾಡುಗಾರರಿಗೆ, ವಿಶೇಷ ಪರಿಣತಿ ತೋರಿಸಿದ ಕಲಾಕಾರರಿಗೆ ಬಹುಮಾನ ನೀಡಿ ಗೌರವಿಸುವುದೂ ಉಂಟು. ಕನಿಷ್ಠ ನಾಲ್ಕು ಅಥವಾ ಅದಕ್ಕಿಂತಲೂ ಹೆಚ್ಚು ಜನ ಕಲಾವಿದರು ಸಾಲುಕಟ್ಟಿ ನಿಲ್ಲುತ್ತಾರೆ. ಗುಮಟೆ ಬಾರಿಸುತ್ತಿರುವಾಗ ಒಬ್ಬ ಹಾಡಲು ಪ್ರಾರಂಭ

ಂತೆ ಇತರರು ಆ ಹಾಡಿನ ಪುನರಾವರ್ತನೆಯ ಎತ್ತುಗಡೆ ಮಾಡಿದಾಗ ನರ್ತಕ 'ಕೂಚ' ಲು ತೊಡಗುತ್ತಾನೆ.

**ಪಾಂಗ್ ಹಾಡು :**

ಣವೋಲೋ ದೇವರ ನೆಣವೋಲೋ

ಟ್ಟಿದಲ್ಲಿ ಕವ್ಲಮ್ಮನ ನೆಣವೋಲೋ

ಟ್ಟಿನಿಂತ ಭೂಮಿತಾಯಿಯೂ ನೆಣವೋಲೋ

ಭೂಮಿ ಹೊತ್ತ ಮಾರೇಶನ ನೆಣವೋಲೋ

ಭೂಮಿ ಹೊತ್ತ ಮಾರೇಶನ ನೆಣವೋಲೋ

ರ್ಮ್ಮ ಇಶ್ಣು ಮಹೇಶನ ನೆಣವೋಲೋ

ಊರ ಒಳಗೆ ಶಿದ್ದುರಾಮನಾ ನೆಣವೋಲೋ

ವಾಕಿಲಲ್ಲೇ ಬಸವಯ್ಯನ ನೆಣವೋಲೋ

ಕೆಲವು ಸಂದರ್ಭಗಳಲ್ಲಿ ಕುಣಿತವಿಲ್ಲದೆ ಗುಮಟೆ ವಾದನ ಮಾತ್ರ ಮಾಡುವುದೂ ಇದೆ. ಕಾರಕ್ಕೆ 'ಹೊಡಿಗುಮ್ಮಟೆ' ಅಂತ ಹೆಸರು. ಹಿಂದಿನ ಕಾಲದಲ್ಲಿ ಗುಮಟೆ ಹಾಡುಗಳು ಯಣ, ಮಹಾಭಾರತದಂತಹ ಪುರಾಣಗಳ ಸುಧೀರ್ಘ ಕಾವ್ಯ ಕಥನಗಳಾಗಿರುತ್ತಿದ್ದವು. ತಿಹಾಸಿಕ ಸಾಮಾಜಿಕ, ರಾಜಕೀಯ, ಕನಕದಾಸ ಪುರಂದರ ದಾಸರ ಕೀರ್ತನೆಗಳ ಸಹಿತ ಕ್ಕ ಹಾಡುಗಳನ್ನೂ ಹಾಡುತ್ತಾರೆ. ಗುಮಟೆಪಾಂಗ್ ಹಾಲಕ್ಕಿ ಜನಾಂಗದ ಅವಿನಾಭಾವ ಧವಿರುವ ಒಂದು ಕಲಾಪ್ರಕಾರ.

ಉತ್ತರ ಕನ್ನಡದ ಕುಮಟಾ, ಅಂಕೋಲಾ, ಹೊನ್ನಾವರಗಳಲ್ಲಿ ವಾಸ್ತವ್ಯವಿರುವ ಕೊಂಕಣಿ ಜನಾಂಗದವರಲ್ಲೂ 'ಗುಮಟೆ ಘಾಂಗ್' ಕಲೆ ಇದೆ. ಆದರೆ ಇವರ ಗುಮಟೆ ಘಾಂಗ್ ದಲ್ಲಿ ಬಳಕೆಯಾಗುವ ಗುಮಟೆಗಳು ಬಿಂದಿಗೆಯ ಆಕಾರದವು.

**ಕ್ಕಲು ಸಮುದಾಯದಲ್ಲಿ ಗುಮಟೆ :** ಗಾಮೊಕ್ಕಲು ಜನಾಂಗ ಉತ್ತರ ಕನ್ನಡ ಜಿಲ್ಲೆಯ ಮತ್ತು ಹೊನ್ನಾವರ ತಾಲೂಕುಗಳಲ್ಲಿ ನದೀ ತೀರದ ಊರುಗಳಲ್ಲಿ ವಾಸ್ತವ್ಯವಿರುವ ಬುಡಕಟ್ಟು ಸಮುದಾಯ. ವಿಂಧ್ಯಾ ಪರ್ವತ ಮತ್ತು ಆಂಧ್ರಪ್ರದೇಶದ ಕಾಡುಮಲೆಗಳ ಶಗಳಿಂದ. ವಿವಿಧ ಕಾಲಘಟ್ಟಗಳಲ್ಲಿ, ವಿವಿಧ ಕಾರಣಗಳಿಂದಾಗಿ ವಲಸೆ ಬಹುದಾದ ಒಕ್ಕಲು ಸಮುದಾಯಗಳ ಪೈಕಿ ಈ ಗಾಮೊಕ್ಕಲು ಸಮಾಜವೂ ಒಂದು. ಹಾದಜಲ್ಲಿ ಇತ್ತೀಚೆಗೆ ಹಿಂದೂ ಜಾತಿ ಪದ್ಧತಿಯ ಕೆಲವು ಸುಧಾರಿತ ಲಕ್ಷಣಗಳು

ಕಂಡು ಬಂದರೂ, ಇವರು ಬುಡಕಟ್ಟು ಸಮುದಾಯದ ಮೂಲ ಲಕ್ಷಣಗಳನ್ನು ಇನ್ನೂ ಉಳಿಸಿಕೊಂಡು ಬಂದಿರುವುದು ಗೋಚರಿಸುತ್ತದೆ. ಗಾಮೊಕ್ಕಲು ಸಮಾಜದಲ್ಲೂ ಹಾಲಕ್ಕಿ ಒಕ್ಕಲು ಸಮುದಾಯದವರಂತೆ ತಮ್ಮ ಸಂಸ್ಕೃತಿ ಸಂಪ್ರದಾಯಗಳಲ್ಲಿ ಗುಮಟೆ ಕಲೆ ಬೆರೆಸಿಕೊಂಡಿರುವುದನ್ನು ಕಾಣಬಹುದು. ಗಾಮೊಕ್ಕಲು ಸಮಾಜದಲ್ಲಿರುವ 'ಗುಮಟೆ ಪದ' ಎಂಬ ಈ ಜಾನಪದ ಕಲೆ ಕುಮಟಾ ತಾಲೂಕಿನ ಬಡಗು ದಿಕ್ಕಿನ ಊರುಗಳಲ್ಲಿ ಮಾತ್ರ ಪ್ರಚಲಿತವಿದೆ. ಆದರೆ ಹೊನ್ನಾವರ ತಾಲೂಕಿನ ಊರುಗಳಲ್ಲಿ ಈ ಕಲೆ ಕಂಡು ಬರುವುದಿಲ್ಲ. ಕುಮಟಾ, ಅಂಕೋಲಾ ತಾಲೂಕುಗಳ ಹಾಲಕ್ಕಿ ಒಕ್ಕಲಿಗರ ಪ್ರಭಾವದಿಂದ ಕುಮಟಾ ತಾಲೂಕಿನ ಗಾಮೊಕ್ಕಲು ಸಮಾಜದಲ್ಲಿ ಈ ಕಲೆ ಇರುವ ಸಾಧ್ಯತೆಗಳಿವೆ. ಗಾಮೊಕ್ಕಲು ಸಮಾಜದವರೂ ಕೂಡಾ ಹಾಲಕ್ಕಿ ಒಕ್ಕಲಿಗರಂತೆಯೇ ಮದ್ದಳೆಯಾಕಾರದ ಉದ್ದವಿರುವ ಗುಮಟೆಯನ್ನೇ ಉಪಯೋಗ ಮಾಡುತ್ತಾರೆ. ಮಣ್ಣಿನಿಂದ ತಯಾರಿಸಲ್ಪಟ್ಟ ಗುಮಟೆಯ ಅಗಲವಿರುವ ಬಾಯಿಗೆ ಉಡದ ಅಥವಾ ಕಾನಕುರಿಯ ಚರ್ಮವನ್ನು ಕಟ್ಟುತ್ತಾರೆ. ಗುಮಟೆಕಾರರು ಮತ್ತು ತಾಳಕಾರರು ತಂತಮ್ಮ ವಾದನಗಳನ್ನು ಪ್ರಾರಂಭಿಸಿದ ಮೇಲೆ ಹಾಡುಗಾರರು ಹಾಡಲು ಉಪಕ್ರಮಿಸುತ್ತಾರೆ. ಇತರರು ಆ ಹಾಡುಗಳನ್ನು ಸಾಮೂಹಿಕವಾಗಿ ಅನುಕರಣೆ ಮಾಡುತ್ತಾರೆ. ದೇವರ ಸ್ತುತಿಯಿಂದ ಪ್ರಾರಂಭವಾದ ಹಾಡುಗಳು ತುಂಬಾ ಸಮಯದವರೆಗೆ ಹಾಡಲ್ಪಡುವಾಗ ರಾಮಾಯಣ, ಮಹಾಭಾರತ ಮತ್ತು ಸಾಮಾಜಿಕ ಸಂಗತಿಗಳಿಗೆ ಸಂಬಂಧಿಸಿದ ಅನೇಕ ಹಾಡುಗಳನ್ನೂ ಹಾಡುತ್ತಾರೆ. ಹಾಲಕ್ಕಿ ಒಕ್ಕಲಿಗ ಸಮುದಾಯದ 'ಹಗರಣ' ಕಲಾ ಪ್ರಕಾರದ ವೇಷಗಳಂತೆ ಗಾಮೊಕ್ಕಲು ಸಮಾಜದ 'ಗುಮಟೆ ಪದ' ಕಲೆಯಲ್ಲೂ ವೇಷಗಳನ್ನು ಕಾಣಬಹುದು. ಆದರೆ ಈ ಗುಮಟೆ ಕಲೆ ಹಾಲಕ್ಕಿ ಒಕ್ಕಲು ಸಮಾಜದಲ್ಲಿ ಪ್ರಾಮುಖ್ಯತೆ ಪಡೆದು ಪ್ರಸಿದ್ಧವಾದ ಮಟ್ಟದಲ್ಲಿ ಗಾಮೊಕ್ಕಲು ಸಮುದಾಯದಲ್ಲಿ ಪ್ರಸಿದ್ಧಿ ಪಡೆದಿಲ್ಲವಾದುದರಿಂದ ಈ ಸಮಾಜದಲ್ಲಿ 'ಗುಮಟೆ ಪದ' ಅವನತಿಯ ಹಾದಿಯಲ್ಲಿದೆ.

**ಬುರ್ರಕಥಾ ಮೇಳದಲ್ಲಿ ಗುಮಟೆ :** ಕರ್ನಾಟಕದಲ್ಲಿ ನೋಡಲು ಸಿಗುವ ಜಾನಪದ ಕಲೆಗಳ ಪೈಕಿ 'ಬುರ್ರಕಥಾ ಮೇಳ'ವೂ ಒಂದು. ಈ ಕಲೆ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿಪ್ರದೇಶಗಳಲ್ಲಿ ಕಂಡುಬರುತ್ತದೆ. ಆಂಧ್ರಪ್ರದೇಶದಲ್ಲಿ ಈ ಕಲೆ ಹೆಚ್ಚು ಪ್ರಸಿದ್ಧವಾಗಿದೆ. ಕರ್ನಾಟಕದಲ್ಲಿ ಕೋಲಾರ, ರಾಯಚೂರು, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ಈ ಕಲಾಕಾರರಿದ್ದಾರೆ. ಈ ಮೇಳದಲ್ಲಿ ಪ್ರಮುಖವಾಗಿ ಮೂರು ಜನ ಕಲಾವಿದರಿರುತ್ತಾರೆ. ಪ್ರಧಾನ ಗಾಯಕ ಮಧ್ಯದಲ್ಲಿ ನಿಂತು ಕಥೆಯನ್ನು ಹಾಡುತ್ತಾ ತನ್ನ ಕೊರಳಿಗೆ ಜೋತು ಹಾಕಿದ ತಂಬೂರಿ ಮೀಟುತ್ತಾನೆ. ಈ ವೇಳೆಯಲ್ಲಿ ಆತನ ಎರಡೂ ಬದಿಗಳಲ್ಲಿ ನಿಂತ ಇಬ್ಬರು ಕಲಾಕಾರರು ಗುಮಟೆಗಳನ್ನು ಬಾರಿಸುತ್ತಾ, ಪ್ರಧಾನ ಗಾಯಕ ಹಾಡುವ ಹಾಡುಗಳನ್ನು ಪುನರುಚ್ಛರಿಸುತ್ತಾ ಕಥಾ ಪ್ರವಾಹಕ್ಕೆ ಸಹಕಾರ ನೀಡುತ್ತಾರೆ. ಬುರ್ರಕಥಾ ಮೇಳದಲ್ಲಿ ಬಳಕೆಯಾಗುವ ಗುಮಟೆ ಮಣ್ಣು, ತಾಮ್ರ ಅಥವಾ ಹಿತ್ತಾಳೆಯಿಂದ ತಯಾರು ಮಾಡಿದ್ದೂ ಇರುತ್ತದೆ. ಆಂಧ್ರಪ್ರದೇಶದ

' ಜಂಗಾಲ' ಕುಲದವರು ಬುರ್ರಕಥಾಮೇಳದ ಮೂಲ ಕಲಾಕಾರರು ಎಂಬುದಾಗಿ ಹಲವು ಶೋಧಕರ ಅಭಿಪ್ರಾಯ. ಈ ಪಂಗಡದ ಮಹಿಳೆಯರೂ ಬುರ್ರಕಥಾ ಕಲಾಕಾರರಾಗಿ ರಾಗಿರುವುದು ತಿಳಿದುಬರುತ್ತದೆ.

ಕರ್ನಾಟಕದ ಹರಿಕಥೆಗೆ ಹೋಲಿಕೆಯಾಗುವ ಬುರ್ರಕಥಾ ಕಲೆಯ ಮೂಲಸ್ಥಳ ಪ್ರದೇಶ. ಆಂಧ್ರಪ್ರದೇಶದಿಂದ ವಲಸೆ ಬಂದು ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿ ಥೆ ಹಾಡಲು ಪ್ರಾರಭಿಸಿ ಮೈಸೂರು ಮಹಾರಾಜರಿಂದ ಬಿರುದು ಪಡೆದ ಕಲಾವಿದರು ರಾಮದಾಸರು. ಇವರ ಮಗ ವೆಂಕಟಸ್ವಾಮಿದಾಸ್. ಮಂಡ್ಯ ಜಿಲ್ಲೆಯ ಮದ್ದೂರು ಕಿನಲ್ಲಿರುವ ಶ್ರೀಮತಿ ಜಯಮ್ಮ ತನ್ನ ತಂದೆ ವೆಂಕಟಸ್ವಾಮಿ ದಾಸರಿಂದ ತನ್ನ ಏಳನೇ ಪ್ರಾಯದಿಂದ ಕಲಿತು ಪ್ರಸಿದ್ಧ ಬುರ್ರಕಥಾ ಕಲಾವಿದೆಯಾಗಿದ್ದಾರೆ. ಈಗ ಅವರಿಗೆ 80 ಹತ್ತಿರವಾದರೂ ಇಬ್ಬರು ಹೆಮ್ಮಕ್ಕಳ ಗುಮಟೆ ಸಾಥಿಯೊಂದಿಗೆ ಬುರ್ರಕಥಾ ಕಲಾ ರ್ಶನ ನೀಡುತ್ತಿದ್ದಾರೆ. ಜಯಮ್ಮ ದಶಂಬರ್ 2001ರಲ್ಲಿ ಉಡುಪಿ ಕೃಷ್ಣ ಮಠದ ಂಗಣದಲ್ಲಿ ಮತ್ತು ಎಂಜಿಎಂ ಕಾಲೇಜಿನ ರವೀಂದ್ರ ಕಲಾಮಂಟಪದಲ್ಲಿ ಈ ಪ್ರದರ್ಶನ ನೀಡಿದ ದಾಖಲೆ ಸಿಗುತ್ತದೆ.

ಬುರ್ರ ಕಥಾ ಮೇಳ ನಡೆಸುವ ಪ್ರಧಾನ ಕಲಾಕಾರ ಸುಂದರವಾಗಿ ಶೃಂಗರಿಸಿ ಕೊಳ್ಳುತ್ತಾನೆ. ಜರಿಯ ರುಮಾಲು, ಪೇಟಾ, ನಿಲುವಂಗಿ, ಕಪ್ಪು ಕೋಟು, ಹೆಗಲಲ್ಲಿ ಜರಿಯ ಶಾಲು, ಚ್ಚೆ, ಕಾಲಿಗೆ ಗೆಜ್ಜೆ, ಬಲಗೈಯಲ್ಲಿ ತಂಬೂರಿ, ಹಣೆಗೆ ಕುಂಕುಮದ ತಿಲಕ, ವಿಭೂತಿ ಕೊಳ್ಳುತ್ತಾನೆ. ಸಹಕಲಾಕಾರರು ಸಾದಾ ತೊಡುಗೆಯಲ್ಲಿರುತ್ತಾರೆ. ಆದರೂ ಅವರ ಗಲಿಗೆ ಒಂದೊಂದು ಗುಮಟೆ ತೂಗುಹಾಕಿಕೊಂಡು ಪ್ರದರ್ಶನದ ಸಮಯ ವಿವಿಧ ರು ಶಬ್ಧ ಹೊರಹೊಮ್ಮುವ ರೀತಿಯಲ್ಲಿ ವಾದನ ಮಾಡುತ್ತಾರೆ. ಊರಿನ ಉತ್ಸವ, ಗಳಲ್ಲಿ ಬುರ್ರಕಥಾ ಮೇಳ ನಡೆಸಿದರೆ ಸಮೃದ್ಧಿಯಾಗುವಂತೆ ಮಳೆ ಬರುತ್ತದೆ ಎಂಬ ಕೆಯಿದೆ. ಮುಗ್ಗುರು ಮರಾಟಿಲು, ಕಾಂಬೋಜರಾಜ, ಪೆದ್ದ ಬೊಟ್ಟಿಲ ರಾಜ, ಕಾವಮ್ಮ ಕಾಟಮರಾಜ ಕಥಾ, ಪರ್ಯಾಯ ಪಾಪಡು , ದೇಸಿಂಗ ರಾಜ ಕಥಾ, ಬಲ್ಲಾಳ ರಾಜ ಕಥಾ ಳ ಕಥಾ, ಬಾಲನಾಗಮ್ಮ ಕಥಾ, ಕುಮಾರ ರಾಮ–ಹೀಗೆ ಥರಾವಳಿ ಕಾವ್ಯ ಕಥನ ಗಳನ್ನು ತ್ತಾರೆ. ಒಂದೊಂದು ಕಥೆಯೂ ಮೂರು ನಾಲ್ಕು ರಾತ್ರಿ ಹಾಡುವಷ್ಟು ರ್ಘವಾಗಿರುತ್ತವೆ. ಕೆಲವು ಬಾರಿ ಕಲಾಕಾರರು ಇಂತಹ ಕಥೆಗಳನ್ನು ಒಂದು ಘಂಟೆ ಯೊಳಗೆ ಮುಗಿಸುವ ಪ್ರತಿಭಾವಂತರಿರುತ್ತಾರೆ. ಬುರ್ರಕಥಾ ಕಲಾಪ್ರಕಾರದಲ್ಲಿ ಖವಾಗಿ ಗುಮಟೆ ಉಪಯೋಗವಾಗುವುದರಿಂದ ಗುಮಟೆ ಉಪಯೋಗದ ಜನಪ್ರಿಯತೆ ಪ್ರದೇಶದಲ್ಲೂ ಪ್ರಚಲಿತದಲ್ಲಿದೆ ಎಂಬುದು ಸ್ಪಷ್ಟವಾಗುತ್ತದೆ.

ಬುರ್ರಕಥಾ ಪದ (ಉದಾ: ಬಾಲನಾಗಮ್ಮ ಕಥೆಯ ಪ್ರಾರಂಭ ) :

ತಂದನಾನಾ ತಂದಾನಾ ತಂದಾನಾ ತಾನ

ತನತಂದನ ತಾನ ತಂದಾನ ತಾನ || ಸೊಲ್ಲು ||

ಕೇಳಿಂತ ಸಭೆಗೊಳ ತಂದಾನ

ಕೇಳಿಂತ ಪ್ರಭುಗಳಾ ತಂದಾನ

ಕಲ್ಲವಾದ್ಯೆಲ್ಲ ತಂದನ

ಪುಣ್ಯವಂತ ಗ್ರಾಮದಲ್ಲಿ

ಸತ್ಯವಂತೆ ಶಿವ ಬಾಲನಾಗಮ್ಮನ ಕಥೆ ಹೇಳುತೀನಿ

ತಂದನಾನಾ ತಾನು ತಂದಾನಾ ತಂದನಾನ್ನ

**ಕರಪಾಲ ಮೇಳದಲ್ಲಿ ಗುಮಟೆ :** ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ವೀರಶೈವ ಜಂಗಮ ಸಮುದಾಯದವರಲ್ಲಿ 'ಕರಪಾಲ ಮೇಳ' ಎಂಬ ಪ್ರದರ್ಶನ ಕಲೆಯಿದೆ. ಕರಪಾಲವು 'ಕರಪಲ್ಲವ' ಎಂಬ ಶಬ್ದದಿಂದ ಬಂದಿರುವ ಸಾಧ್ಯತೆಯಿದೆ. ಕರಪಲ್ಲವ ಅಂದ್ರೆ ಸಂಸ್ಕೃತದಲ್ಲಿ 'ಕೈಸಂಜ್ಞೆ' ಎಂದರ್ಥ. ಕರಪಲ್ಲವ - ಕರಪಲ್ಲವಾಗಿ ಕರಪಾಲ ಎಂದಾಗಿರಬಹುದು ಎಂಬ ವಿಶ್ಲೇಷಣೆ ನಡೆದಿದೆ. ಈ ಮೇಳದ ಕಲಾವಿದರು ವೀರಗಚ್ಚೆ ಹಾಕಿ ಬಿಳಿಯ ಜುಬ್ಬ, ತಲೆಗೆ ಮುಂಡಾಸು, ಅಂಬೆಸರ ಕಿರೀಟ, ಕಾಲಿಗೆ ಗೆಜ್ಜೆ, ಹಣೆಗೆ ವಿಭೂತಿ, ಕೊರಳಿಗೆ ರುದ್ರಾಕ್ಷಿ ಮಾಲೆ - ಹೀಗೆ ಪೌರಾಣಿಕ ನಾಟಕಗಳಿಗೆ ಉಪಯೋಗಿಸುವ ವಸ್ತ್ರಾಭರಣಗಳನ್ನು ಧರಿಸಿದ ಮೇಳದಲ್ಲಿ ಒಬ್ಬ ಮುಖ್ಯ ಕಥೆಗಾರ, ಇಬ್ಬರು ಸಹನರ್ತಕರು ಹಾಗೂ ಮೂವರು ಹಿಮ್ಮೇಳದಲ್ಲಿ ಒಟ್ಟು ಐವರು ಕಲಾವಿದರಿರುತ್ತಾರೆ.

ಕರಪಾಲ ಮೇಳವು ಪೂರ್ತಿಯಾಗಿ ಮುಖ್ಯ ಕಥೆಗಾರನನ್ನು ಅವಲಂಬಿಸಿರುತ್ತದೆ. ನಿರೂಪಕನು ಕಥೆಯನ್ನು ವಿವರಿಸುವಾಗ ಇಬ್ಬರು ಸಹನರ್ತಕರೂ ಹೂಂಗುಟ್ಟುತ್ತಾ ನಡುವೆ ಅವನನ್ನು ಪ್ರಶ್ನಿಸುತ್ತಾರೆ. ಹೀಗೆ ಪ್ರಶ್ನಿಸುತ್ತಿರುವಾಗಲೇ ಮೇಳಕ್ಕೆ ಕಳೆಬರುತ್ತದೆ. ಕಥೆಗಾರನು ಹಾಡುತ್ತಾ ಸಹ ನರ್ತಕರಿಗೆ ಹಾಡುಗಳನ್ನು ಎತ್ತಿ ಕೊಡುವಾಗ ಆ ಹಾಡುಗಳನ್ನು ಅವರು ಎತ್ತುಗಡೆ ಮಾಡಿ ನರ್ತಿಸುತ್ತಾರೆ.

ಈ ಮೇಳದ ಇನ್ನೊಂದು ರೂಪ ವೈವಿಧ್ಯಮಯವಾಗಿದ್ದು 'ಕರಪಲ್ಲ' ವೆಂದು ಪ್ರಸಿದ್ಧವಾಗಿದೆ . ಕನಿಷ್ಠ ಮೂರು ಜನ ಕಲಾವಿದರು ಬೇಕಾಗುವ ಈ ಮೇಳದಲ್ಲಿ ಮುಖ್ಯ ನಿರೂಪಕನೊಬ್ಬ ಹಾಡುತ್ತಿರುವಾಗ ಶಿಷ್ಯರಿಬ್ಬರು ಸ್ವಲ್ಪ ದೂರದಲ್ಲಿ ಹಿಮ್ಮೇಳದೊಂದಿಗೆ ನರ್ತಿಸುತ್ತಿರುತ್ತಾರೆ. ಇವರ ಸುತ್ತ ಜನನೆರೆದಾಗ ಅವರಲ್ಲಿ ಹಣ ಕೊಡಬಹುದಾದವರ ಹೆಸರನ್ನು

ಯು ಮೂಲಕ ಗುರುವು ಶಿಷ್ಯರಿಗೆ ತಿಳಿಸುತ್ತಾನೆ. ಹೆಸರನ್ನು ಮಾತಿನಲ್ಲಿ ಹೇಳದೇ ಕೈಸನ್ನೆ ಕ ತಿಳಿಸುವುದು ಈ ಕಲೆಯ ವಿಶೇಷತೆ. ಆದುದರಿಂದ ಈ ಕಲೆಗೆ 'ಕರಪಲ್ಲ' ಅಂತ .

ಶೈವ ಧರ್ಮಪ್ರಸಾರದ ಉದ್ದೇಶವಿರುವ ಈ ಕಲೆಯಲ್ಲಿ ಕಾಲಜ್ಞಾನದ ಹಾಡುಗಳನ್ನು ತ್ತಾರೆ. ಗಣಪತಿ ವಂದನೆ, ಶಾರದಾಸ್ತುತಿಯ ನಂತರ ಕಾಡಸಿದ್ಧಮ್ಮನ ಕತೆ, ರೂಪಾವತಿ ೨, ಕಳಿಂಗ ಮಹಾರಾಜನ ಕತೆ, ಶನಿ ಮಹಾತ್ಮೆ, ಸತ್ಯವ್ರತ, ರುದ್ರೇಶ್ವರ ಮಹಾತ್ಮೆ, ಗ ಕುಮಾರ ಮುಂತಾದ ಕತೆಗಳ ಪ್ರದರ್ಶನದಲ್ಲಿ ದಿನನಿತ್ಯದ ಬದುಕಿನ ಪ್ರಸಂಗಗಳು ಳಿತೆಗೊಂಡಿರುತ್ತವೆ. ಎಲ್ಲಾ ಕಥೆಗಳಲ್ಲಿ ಶಿವಪಾರ್ವತಿಯರೇ ಮುಖ್ಯರಾಗಿ ಸಂತಾನ, ೀಗ್ಯ, ಐಶ್ವರ್ಯ, ಸುಖ, ಸೌಭಾಗ್ಯ ಕರುಣಿಸುವ ಪರಮೇಶ್ವರನ ಸ್ತುತಿ ಮೇಳದ ಂಗದ ಉದ್ದೇಶ.

ಮೇಳವು ವೇದಿಕೆಯಲ್ಲಿ ಪ್ರದರ್ಶಿಸಲ್ಪಡುತ್ತದೆ. ಸುಮಾರು ಎಂಟು ಅಡಿ ಎತ್ತರದ ೀಯು ನಾಲ್ಕು ಕಂಬಗಳಿಂದ ರಚಿಸಲ್ಪಟ್ಟು ಪ್ರೇಕ್ಷಕರ ಕಡೆಗೆ ತೆರೆದು ಉಳಿದ ಮೂರು ಸೋಗೆಗಳಿಂದ ಮುಚ್ಚಿರುತ್ತದೆ. ಕರಪಾಲ ಮೇಳದಲ್ಲಿ ಮುಖ್ಯವಾದ ಹಿಮ್ಮೇಳ ಅಂದರೆ ಟೆಗಳು ಮತ್ತು ತಾಳಗಳು ಗುಮಟೆ ವಾದನ ಕರಪಾಲ ಕುಣಿತಕ್ಕೆ ವಿಶೇಷವಾದ ಹಿಮ್ಮೇಳ. ಈ ಗುಮಟೆ ಮತ್ತು ತಾಳಗಳೊಂದಿಗೆ ಹಾರ್ಮೋನಿಯಮ್ ಮತ್ತು ಮದ್ದಳೆಗಳು ಲ್ಪಡುತ್ತಿವೆ. ಗುಮಟೆಗಳನ್ನು ಬಳಸುವುದು ವಿರಳವಾಗುತ್ತಾ ಬಂದಿರುವುದನ್ನು ಬಹುದು.

**ಸಮುದಾಯದಲ್ಲಿ ಗುಮಟೆ :** ಉತ್ತರ ಕನ್ನಡ ಜಿಲ್ಲೆಯ ಕುಮಟಾ ಮತ್ತು ಹೊನ್ನಾವರ ಕುಗಳ ಹಳ್ಳಿಗಳಲ್ಲಿ ಮಾತ್ರ ಕಾಣಲು ಸಿಗುವ 'ಮುಕ್ರಿ' ಸಮುದಾಯ ಕನ್ನಡ ಭಾಷೆಯ ಜನಾಂಗ. ಈ ಜನಾಂಗದವರು ವಾಸ್ತವ್ಯವಿರುವ ಪ್ರದೇಶ ನೈಸರ್ಗಿಕವಾಗಿ, ಸೌಂದರ್ಯದಲ್ಲಿ ಶ್ರೀಮಂತ ಸೊಬಗನ್ನು ಹೊಂದಿದೆ. ಆದರೆ ಇಲ್ಲಿ ವಾಸ್ತವ್ಯವಿರುವ ' ಜನಾಂಗ ಬಡತನ ರೇಖೆಗಿಂತಲೂ ದುರ್ಬಲ ಪರಿಸ್ಥಿತಿಯಲ್ಲಿ ಜೀವನ ಸಾಗಿಸುತ್ತಾರೆ. ಎಲ್. ಜಿ. ಭಟ್ಟ ಇವರ 'ಮುಕ್ರಿಯರು' ಎಂಬ ಜನಾಂಗೀಯ ಪರಿಚಯಾತ್ಮಕ ವನ್ನು ಐಬಿಎಚ್ ಪ್ರಕಾಶನದವರು ಪ್ರಕಟಿಸಿದ್ದಾರೆ. ಎಸ್. ಸಿಲ್ವಾ ಎಂಬವರು ಬರೆದ ಾರ ಜಿಲ್ಲಾ ದರ್ಶನ' ಮೈಸೂರು ಗಝೆಟಿಯರ್ ಆಫ್ ಬಾಂಬೆ ಪ್ರೆಸಿಡೆನ್ಸಿ' ಕರ್ನಾಟಕ ಟಿಯರ್ ಎಡ್ಗರ್ ಥರ್ಸ್ಟನ್ ಇವರ Castes and tribes of southern India ಗ್ರಂಥಗಳಲ್ಲಿ ಮುಕ್ರಿ ಜನಾಂಗದ ಬಗ್ಗೆ ಮಾಹಿತಿ ಸಿಗುತ್ತದೆ.

ಮುಕ್ರಿ ಸಮಾಜದ ಜಾನಪದದಲ್ಲೂ ಗುಮಟೆಗೆ ಪ್ರಾಧಾನ್ಯತೆ ಇದೆ. ಹಾಲಕ್ಕಿ ಾಯದಂತೆಯೇ ಮುಕ್ರಿಯರ ಗುಮ್ಮಾ ಫಾಂಗ್, ಗುಮಟೆ ಮತ್ತು ಕೋಲಾಟ - ಈ

ಮೂರೂ ಕಲೆಗಳಲ್ಲಿ ಉಪಯೋಗಿಸಲ್ಪಡುವ ಪ್ರಧಾನ ಸಂಗೀತ ವಾದ್ಯ ಗುಮಟೆ. ಹಾಲಕ್ಕಿ ಸಮಾಜದ 'ಹಗರಣ' ಮುಕ್ರಿಯರಲ್ಲೂ ವಾಡಿಕೆಯಲ್ಲಿದೆ. ಈ ಹಗರಣ ಕಲೆಯಲ್ಲಿ ಪೌರಾಣಿಕ ಹಾಗೂ ಹಾಸ್ಯ ಪ್ರಧಾನ ವೇಷ ಹಾಕಿ ಕುಣಿಯುತ್ತಾರೆ. ಸುಗ್ಗಿಯ ಸಂದರ್ಭ ಮಾತ್ರ ಆಡುವ ಈ ಕಲೆಯಲ್ಲಿ ಉಪಯೋಗವಾಗುವ ಗುಮಟೆ ಮದ್ದಳೆಯಂತಹ, ಉದ್ದ ಮತ್ತು 'ಬಿಂದಿಗೆ' ಆಕಾರದ ಗುಮಟೆಗಳು - ಹೀಗೆ ಎರಡೂ ಬಗೆಯವು ಬಳಸಲ್ಪಡುತ್ತವೆ.

**ವಿವಿಧ ಕಲಾಪ್ರಕಾರವಾಗಿ ಗುಮಟೆ ಕುಣಿತ :**

**'ಗೋಫ್' ಕೋಲಾಟದಲ್ಲಿ ಗುಮಟೆ :** ಉತ್ತರ ಕನ್ನಡ ಜಿಲ್ಲೆಯಲ್ಲಿ ಬ್ರಾಹ್ಮಣ ಸ್ತ್ರೀಯರು, ಮರಾಠಿ, ಕೋಮಾರಪಂಥ, ಪಡತಿ ವೈಶ್ಯ ಮತ್ತು ಅಂಬಲಿಗ ಸಮುದಾಯದ ಜನರು ಈ 'ಗೋಫ್' ಆಟ ಆಡುತ್ತಾರೆ. ಹೋಳಿಯ ಸಂದರ್ಭದಲ್ಲಿ ಗೋವಾದ ಮಂಗೇಶಿಯಲ್ಲಿ ಸ್ತ್ರೀಯರು ಮತ್ತು ಸಾಂಗೆಂ, ಫೊಂಡಾ, ಕಾನಾಕೊನಾ, ಪೆಡ್ನೆಂ ಪ್ರದೇಶಗಳಲ್ಲಿ ಪುರುಷರು ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಇದು ಕರ್ನಾಟಕದ ಜಡೆ ಕೋಲಾಟದ ಇನ್ನೊಂದು ರೂಪವೆನ್ನಬಹುದು. ಇಲ್ಲಿ ಹಗ್ಗಗಳ ಬದಲಿಗೆ ರಂಗುರಂಗಿನ ಸೀರೆಗಳು ಅಥವಾ ಬಟ್ಟೆಯ ಪಟ್ಟಿಯಂತಹ ಇತರ ಸಾಮಗ್ರಿಗಳು ಉಪಯೋಗವಾಗುತ್ತವೆ. ಸುಮಾರು 15 ಅಡಿ ಎತ್ತರದ ಬಿದಿರಿನ ಎರಡು ಕಂಭಗಳನ್ನು ನೆಟ್ಟು, ಮೇಲೆ ಅಡ್ಡವಾಗಿ ಒಂದು ಬಿದಿರನ್ನು ಕಟ್ಟುತ್ತಾರೆ. ಈ ಅಡ್ಡ ಬಿದಿರಿನ ಮಧ್ಯಕ್ಕೆ ಕಟ್ಟಿ ಕೆಳಗಡೆ ಇಳಿಬಿಟ್ಟ ವಿವಿಧ ರಂಗಿನ ಸೀರೆ ಅಥವಾ ಬಟ್ಟೆಯ ಪಟ್ಟಿಗಳ ಕೊನೆತುದಿಗಳನ್ನು ಕಲಾಕಾರರು ಒಂದು ಕೈಯಲ್ಲಿ ಹಿಡಿದುಕೊಂಡು, ಇನ್ನೊಂದು ಕೈಯಲ್ಲಿ ಕೋಲಾಟದ ಕೋಲುಗಳನ್ನು ಹಿಡಿದುಕೊಂಡು ವರ್ತುಲಾಕಾರದಲ್ಲಿ ನಿಲ್ಲುತ್ತಾರೆ. ಕುಣಿತಗಾರರು ಸ್ವತಃ ಹಾಡುತ್ತಾ ವಿವಧ ರೀತಿಯಲ್ಲಿ ನಿಯಮಿತವಾಗಿ ಒಬ್ಬರಿಗೊಬ್ಬರು ತೂರಿಕೊಂಡು ಗೋಫ್, ಸರಪಳಿ, ಜಡೆಗಳನ್ನು ಹೆಣೆಯುತ್ತಾರೆ. ಈ ಪ್ರದರ್ಶನ ಕಲೆಯಲ್ಲಿ ಹಾಡುಗಳೊಂದಿಗೆ ಹಿಮ್ಮೇಳದ ವಾದನಕ್ಕೆ ಬಳಸಲ್ಪಡುವ ಪ್ರಧಾನ ವಾದ್ಯ 'ಗುಮಟೆ'

**'ಜಾಗೊರ್' ಕಲಾ ಪ್ರಕಾರದಲ್ಲಿ ಗುಮಟೆ :** ಗೋವಾದ 'ಗಾವ್ಡೆ' (ಗೌಡಿ) ಸಮುದಾಯದವರು ಆಡುವ, ಗೀತನಾಟಕದ ಒಂದು ಜಾನಪದ ಪ್ರಕಾರ 'ಜಾಗೊರ್'. ಸಂಗೀತ, ನೃತ್ಯ ಮತ್ತು ಮಾತುಗಾರಿಕೆಗಳಿಂದ ಕೂಡಿದ ಈ ಜಾನಪದ ಕಲೆ ಕೊಂಕಣಿ ಸಂಸ್ಕೃತಿಯ ಒಂದು ಪ್ರತೀಕ. 'ಮಾಂಡ್' ಎಂಬ ವೇದಿಕೆಯಲ್ಲಿ ಈ ಆಟ ರಾತ್ರಿಯಿಡೀ ಪ್ರದರ್ಶಿಸಲ್ಪಡುತ್ತದೆ. ಕರ್ನಾಟಕದಲ್ಲಿ ಯಕ್ಷಗಾನಕ್ಕೆ ಜನ ಸೇರುವಂತೆ ಜಾಗೊರ್ ನೋಡಲು ಪ್ರೇಕ್ಷಕರು ಸೇರುತ್ತಾರೆ. ಈ ಜಾನಪದ ಕಲೆಯಲ್ಲಿ ಪ್ರಮುಖವಾಗಿ ಉಪಯೋಗವಾಗುವ ವಾದ್ಯಗಳು - ನಗಾರಿ, ಕಂಸಾಳೆ, ಝುಂಜ್ ಮತ್ತು 'ಗುಮಟೆ'

ಗೋವಾದ ಕಲಾವಿದರಾದ ಕಾಂತಾಗಾವ್ಡೆ ಮತ್ತು ತಂಡದವರು ಈ ಜಾಗೊರ್ ಕಲಾ ಪ್ರದರ್ಶನದಲ್ಲಿ ಪ್ರಸಿದ್ಧ ಹೆಸರು. ಈ ತಂಡದವರು ದೇಶಾದ್ಯಂತ, ಹಾಗೆಯೇ ಸಿಂಗಾಪುರ,

ರಿಯಾ ಮುಂತಾದ ಅಂತಾರಾಷ್ಟ್ರೀಯ ವೇದಿಕೆಗಳಲ್ಲೂ. ಈ ಕಲಾ ಪ್ರದರ್ಶನ ನೀಡಿದ್ದಾರೆ ಪ್ರಶಸ್ತಿ ಪುರಸ್ಕಾರಗಳನ್ನೂ ಪಡೆದಿದ್ದಾರೆ.

**ಖೇಳ್ :** 'ಖೇಳ್' ಒಂದು ತರದ ನಾಟಕರೂಪದ ಹಳ್ಳಿಯ ಜಾನಪದ ಕಲೆ. ಹಬ್ಬ, ರಗಳ ಸಂದರ್ಭಗಳಲ್ಲಿ ಈ ಕಲೆಯನ್ನು ಪ್ರದರ್ಶಿಸುತ್ತಾರೆ. ಗುರಿಕಾರನ ಮನೆಯಲ್ಲಿ ಭಿಸಿ, ಊರಿನ ಇತರ ಮನೆಗಳಲ್ಲಿ ಕಲಾಕಾರರು ಆಡುತ್ತಾರೆ. ಈ ತಂಡದ ಮುಖ್ಯಸ್ಥನಿಗೆ ಅಂತ ಹೆಸರು. ಈ ಮೆಸ್ತ್ರ ನಾಟಕದ ಲೇಖಕ, ದಿಗ್ದರ್ಶಕ ಮತ್ತು ತಯಾರಕನಾಗಿರುತ್ತಾನೆ. ಸ್ಥಿತಿವಂತರ ಮನೆಯಂಗಳದಲ್ಲಿ ಈ ಕಲೆಯನ್ನು ಪ್ರದರ್ಶಿಸುವಾಗ ಆ ಜಾಗದಲ್ಲಿ ೆ ಊರೇ ಪ್ರೇಕ್ಷಕರಾಗಿ ಸೇರುತ್ತಾರೆ. ಕಲಾಕಾರರ ಪ್ರವೇಶಕ್ಕೆ ಮೊದಲು ಕೊಂಬು, ು, ವಾಯೊಲಿನ್‌ಗಳೊಂದಿಗೆ ವಾದನಕ್ಕಾಗಿ ಉಪಯೋಗಿಸುವ ವಾದ್ಯ 'ಗುಮಟೆ'

**ಶ್ರವೊಣ್ :** ಕೇರಳದಲ್ಲಿ 'ಗಡೆ ಹೊರಾಂವ್ಚೆಂ' (ದೇವರ ಸ್ತುತಿ) ಗೀತೆಯೇ 'ಶ್ರವೊಣ್'. ಳಿಯ ದಿವಸ ಸಾಯಂಕಾಲ ಕುಡುಬಿಯರು ಕುಲದೇವರ ದೇವಸ್ಥಾನದ ಎದುರು ಗಾಯನ ಭಿಸಿ ಮೆರವಣಿಗೆಯಲ್ಲಿ ಸ್ಮಶಾನಕ್ಕೆ ಹೋಗುತ್ತಾರೆ. ಅಲ್ಲಿ ಮೃತರಾದ ಹಿರಿಯರ ಆತ್ಮಗಳ ಾಗಿ ಧಾರ್ಮಿಕ ವಿಧಿಗಳನ್ನು ನೆರವೇರಿಸುತ್ತಾರೆ. ಈ ಧಾರ್ಮಿಕ ವಿಧಿಗಳನ್ನು ನಡೆಸುವ ರುದಲ್ಲಿ ವಾದನ ಮಾಡುವ ಮದ್ದಳೆ, ಊದುವಾದ್ಯ, ದೊಡ್ಡ ತಾಳಗಳೊಂದಿಗೆ ಬಾರಿಸುವ ೊಂದು ವಾದ್ಯ 'ಗುಮಟೆ'

**ಮಾಂಡೊ :** ಪ್ರೀತಿ, ವಿರಹ ವಿಳಾಪ ಮತ್ತು ಪ್ರಸ್ತುತ ಸಾಮಾಜಿಕ ಹಾಗೂ ರಾಜಕೀಯ ನೆಗಳ, ನಿಧಾನಗತಿಯ ಅಲಾಪನೆಗಳಿಂದ ರಚಿತವಾದ ಹಾಡುಗಳ ಪ್ರಕಾರ 'ಮಾಂಡೊ'. ಾಡುಗಳಿಗೆ ತಕ್ಕುದಾದ ಕುಣಿತವೂ ಇದ್ದು, ಗೋವಾದಲ್ಲಿ ಕ್ರಿಶ್ಚಿಯನ್ ಸಮುದಾಯದಲ್ಲಿ ೆ ಪ್ರಸಿದ್ಧವಾದ ನೃತ್ಯ ಪ್ರಕಾರವಾಗಿದೆ. ಗೋವಾದ ಶ್ರೀಮಂತ ಮಹಲುಗಳಲ್ಲಿ ರಕೂಟಗಳು ನಡೆಯುವಾಗ ತುಂಬಾ ಜನ ಸೇರುತ್ತಿದ್ದರು. ಆ ಸಂದರ್ಭ ಹಜಾರದ ಲ ಹತ್ತಿರ ಒಬ್ಬನು ಒಮ್ಮೆಂದೊಮ್ಮೆಗೇ ಗುಮಟೆ ಬಾರಿಸಿದರೆ ಆ ಮಹಲಿನಲ್ಲಿ ಅಂದು ಡೊ' ನೃತ್ಯವಿದೆ ಅಂತ ಅರ್ಥ. ಅತಿಥಿಗಳನ್ನು 'ಮಾಂಡೊ' ಪ್ರದರ್ಶನಕ್ಕೆ ಆಮಂತ್ರಿಸಲು ೀತಿ 'ಗುಮಟೆ' ಉಪಯೋಗವಾಗುತ್ತಿತ್ತು.

**ಧನಗರ್ ನೃತ್ಯ :** ಗೋವಾದಲ್ಲಿ 'ಧನಗರ್' (Shepherd Community) ದಾಯದವರು ದಸರಾ ಸಮಯದಲ್ಲಿ 'ಹೊರ್ಬೊಲಾ' ಎಂಬ ನೃತ್ಯವಾಡುತ್ತಾರೆ. ಈ ್ಕ ದೇಹವಿಡೀ ಮುಚ್ಚುವಂತೆ ಬಿಳಿ ನಿಲುವಂಗಿ ಧರಿಸುತ್ತಾರೆ. 'ಹೊಡರ್-ಹೊಡರ್ ರ್ಬಾಲಾ' ಅಂತ ಕೂಗು ಹಾಕುತ್ತಾ, ಸಾಲುಕಟ್ಟಿ ಉದ್ದಕ್ಕೆ, ಅಡ್ಡಕ್ಕೆ ಚಲಿಸುತ್ತಾ ರುತ್ತಾರೆ. ಈ ಕುಣಿತ ಒಂದು ಕೈಯಿಂದ ರಂಗುರಂಗಿನ ರುಮಾಲು ಎತ್ತಿ, ಇನ್ನೊಂದು ಂದ ವಿಶಿಷ್ಟ ರೀತಿಯ ಹಸ್ತ ಮುದ್ರೆ ಪ್ರದರ್ಶಿಸುತ್ತಾ, ರುಮಾಲನ್ನು ಕೈಯಿಂದ ಕೈಗೆ ಾಯಿಸುತ್ತಾ ಮುಂದುವರೆಯುತ್ತದೆ.

ಈ ಸಮುದಾಯದಲ್ಲಿ ಹೋಳಿ ಉತ್ಸವ ಸಂದರ್ಭ 'ಜಪಯ್' ಎಂಬ ಇನ್ನೊಂದು ನೃತ್ಯ ಪ್ರಕಾರ ಪ್ರಚಲಿತದಲ್ಲಿದೆ. ಈ ನೃತ್ಯದಲ್ಲಿ ನೃತ್ಯಕಾರರ ಕೈಯಲ್ಲಿ ರುಮಾಲು ಇರುವುದಿಲ್ಲ. ಹಸ್ತ ಮುದ್ರಿಕೆಯ ಪ್ರದರ್ಶನ ಜಾಸ್ತಿಯಿರುತ್ತದೆ. ಧನಗರರ ಈ ಎರಡೂ ನೃತ್ಯಗಳಲ್ಲಿ ಹಾಡುಗಾರಿಕೆ ಇರುವುದಿಲ್ಲ. ಆದರೆ ಹಿಮ್ಮೇಳದಲ್ಲಿ ಧೋಲು ಮತ್ತು ಝಂಜ್ ಎಂಬ ತಾಳಗಳೊಂದಿಗೆ 'ಗುಮಟೆ' ಬಾರಿಸುತ್ತಾರೆ.

**ಕುಣ್ಬಿ ನೃತ್ಯ :** ಗೋವಾದಲ್ಲಿ 'ಕ್ರಿಶ್ಚಿಯನ್ ಕುಣ್ಬಿ ಗಾವ್ಡೆ' ಸಮಾಜದ ಮಧ್ಯವಯಸ್ಕ ಸ್ತ್ರೀಯರು ವಿವಾಹ ಸಂದರ್ಭಗಳಲ್ಲಿ ಅಥವಾ ಬೆಳೆಯ ಕೊಯ್ಲು ಮುಗಿದ ನಂತರ ಮನೆಯ ಅಂಗಳದಲ್ಲಿ ಒಟ್ಟು ಸೇರಿ 'ಕುಣ್ಬಿ ನೃತ್ಯ' ಆಡುತ್ತಾರೆ. ಇದಕ್ಕೆ ತಕ್ಕಂತೆ ಪೋಷಾಕು ತೊಟ್ಟು, ತಲೆಗೆ ಹೂ ಮುಡಿದು, ಸೊಂಟಕ್ಕೆ ಬಿಗಿದ ಬಿಳಿ ಶಾಲಿನ ಎರಡೂ ತುದಿಗಳನ್ನು ಎರಡು ಕೈಗಳಲ್ಲಿ ಹಿಡಿದು, ಎರಡು ಸಾಲುಗಳಲ್ಲಿ ನಿಂತುಕೊಳ್ಳುತ್ತಾರೆ. ಹಾಡುಗಳನ್ನು ಹಾಡಿ ಮತ್ತು ಕೆಲವು ಬಾರಿ ಹಾಡುಗಳಿಲ್ಲದೆಯೂ ಪ್ರದರ್ಶಿಸಲ್ಪಡುವ ಈ ನೃತ್ಯದಲ್ಲಿ ಪುರುಷರು ಹಾಡುಗಾರಿಕೆಯಲ್ಲಿ ತೊಡಗುವುದುಂಟು. ವಾದ್ಯದ ಹಿಮ್ಮೇಳದಲ್ಲಿ ಘೋಲು, ತಾಳ, ಮದ್ದಳೆಗಳೊಂದಿಗೆ ಎರಡು ಮೂರು ಗುಮಟೆಗಳನ್ನು ನುಡಿಸುತ್ತಾರೆ. ಇದು ವಿಧಿನೃತ್ಯವಾಗಿರದೆ ಮನೋರಂಜನೆಗಾಗಿ ಮಾಡುವ ನೃತ್ಯವಾಗಿದೆ.

**ತಾಲ್ಗಡಿ ನೃತ್ಯ :** ಇದು ಹೋಳಿಯ ಸಮಯ ಆಡುವ ಒಂದು ನೃತ್ಯಪ್ರಕಾರ. ಆಡುವ ರೀತಿ ಕೋಲಾಟದ ಶೈಲಿಯಲ್ಲಿದ್ದು ಪ್ರಾದೇಶಿಕ, ಸಾಮುದಾಯಿಕ ವೈವಿಧ್ಯಗಳಿವೆ. ಕಲಾಕಾರರು ಸಮಸಂಖ್ಯೆಯ ಜೋಡಿಗಳಾಗಿರುತ್ತಾರೆ. 'ಮಾಂಡ್' ನಲ್ಲಿ, ದೇವಸ್ಥಾನಗಳ ಎದುರು, ಮನೆಯಂಗಳಗಳಲ್ಲಿ 'ತಾಲ್ಗಡಿ' ನೃತ್ಯ ಆಡುತ್ತಾರೆ. ಹಿಮ್ಮೇಳ ವಾದ್ಯಗಳಲ್ಲಿ ಘೋಲು, ತಾಶೆ, ಕಂಸಾಳೆ, ತಬಲಾ, ಸಮ್ಮೇಳಗಳೊಂದಿಗೆ 'ಗುಮಟೆ' ಗಳನ್ನು ನುಡಿಸುತ್ತಾರೆ.

**ಮೊರುಲೆ ನೃತ್ಯ :** ಗೋವಾದ ದಿಚೊಲ್ ತಾಲೂಕಿನ ಸರ್ವಣ ಎಂಬ ಊರಿನಲ್ಲಿ ಮಯೂರ ನೃತ್ಯದ ಪ್ರಕಾರವಾದ ಈ 'ಮೊರುಲೆ' ನೃತ್ಯವನ್ನು ಪರಂಪರೆಯ ಸಂಪ್ರದಾಯದಂತೆ ಹೋಳಿಯ ಸಂದರ್ಭದಲ್ಲಿ ಆಡುತ್ತಾರೆ. ಈ ನೃತ್ಯ ತಾಲ್ಗಡಿ ನೃತ್ಯವನ್ನೇ ಹೋಲುತ್ತದಾದರೂ ಇದರಲ್ಲಿ ಭಾವಾವೇಷ, ಕುಣಿತದ ಅಬ್ಬರಗಳು ಹೆಚ್ಚು. ಸಮ ಸಂಖ್ಯೆಯ ಕಲಾಕಾರರು ಧೋತಿಯ ಕಚ್ಚೆ, ಸೊಂಟ ಪಟ್ಟಿಗೆ ಶಾಲು, ಬನಿಯನ್, ಹಣೆಪಟ್ಟಿ, ಕೊರಳಲ್ಲಿ ಹೂ ಮಾಲೆಗಳನ್ನು ಧರಿಸುತ್ತಾರೆ. ಈ ನೃತ್ಯದ ಹಿಮ್ಮೇಳದಲ್ಲಿ ಈಗ ಆಧುನಿಕ ವಾದ್ಯಗಳನ್ನು ಬಳಸುತ್ತಾರಾದರೂ ಪೂರ್ವದಲ್ಲಿ 'ಗುಮಟೆ'ಗಳನ್ನೇ ಉಪಯೋಗಿಸುತ್ತಿದ್ದರು.

**ಸೊಮಯ್ ನೃತ್ಯ :** ಗೋವಾದ ಕಾನಾಕೋನಾ, ವ ಸಾಂಗೆಂ ತಾಲೂಕುಗಳಲ್ಲಿ ಹೋಳಿ ಉತ್ಸವ ಸಂದರ್ಭಗಳಲ್ಲಿ ಆಡುವ 'ಸೊಮಯ್' ಎಂಬ ದೈಹಿಕ ಕಸರತ್ತಿಗೆ ಪ್ರಾಮುಖ್ಯತೆ ಇರುವ ನೃತ್ಯ ಪರಂಪರೆಯಿದೆ. ಈ ನೃತ್ಯದ ಕಲಾವಿದರು ಧೋತಿಯ ಕಚ್ಚೆ, ಅಂಗಿ, ಸೊಂಟಕ್ಕೆ

ಕೊರಳಲ್ಲಿ ಹೂಮಾಲೆ, ಹಣೆಪಟ್ಟಿಗಳನ್ನು ಧರಿಸುತ್ತಾರೆ. ತಲೆಯ ಮೇಲೆ ಕಾಲುದೀಪ ಟ್ಟು ವಿವಿಧ ರೀತಿಯ ಆಂಗಿಕ ಚಲನೆಗಳನ್ನು ಪ್ರದರ್ಶಿಸುವುದು ಈ ನತ್ಯದ ವಿಶೇಷ. ಯಿಯ್ ನಾಚ್' ಅಂದರೆ ದೀಪ ನೃತ್ಯವಾದುದರಿಂದ ರಾತ್ರಿವೇಳೆ ಈ ಪ್ರದರ್ಶನವಿರುತ್ತದೆ. ತ್ಯವೂ ಸಮ್ಮೇಳ, ಝುಂಜ್ ತಾಳ ಮತ್ತು 'ಗುಮಟೆ' ಗಳ ಹಿಮ್ಮೇಳದೊಂದಿಗೆ ುತ್ತದೆ.

ಧಾಲೊ ಫುಗ್ಡಿ: ಗೋವಾದಲ್ಲಿ ಸಾರಸ್ವತ ಸಮಾಜವನ್ನು ಹೊರತುಪಡಿಸಿ, ಎಲ್ಲ ಗಗಳ ಸ್ತ್ರೀಯರು ಪಾತ್ರ ವಹಿಸುವ ನೃತ್ಯ ಪ್ರಕಾರವೆಂದರೆ 'ಫುಗ್ಡಿ'. ಈ ನೃತ್ಯದಲ್ಲಿ ರ್ ಫುಗ್ಡಿ, ಕಳ್‌ಶಿ ಫುಗ್ಡಿ, ನಾಗ್ಡಿ ಫುಗ್ಡಿ, ಸಾದೀ ಫುಗ್ಡಿ, ಭೊಂವರೀ ಫುಗ್ಡಿ, ಬಸ್‌ಕಿ ಫುಗ್ಡಿ, ಫುಗ್ಡಿ, ಜೋಡೀ ಫುಗ್ಡಿ, ಉಬೀ ಫುಗ್ಡಿ, ದಾಂಡೊ ಫುಗ್ಡಿ, ಬೆಬ್ಕಿ ಫುಗ್ಡಿ, ಧಾಲೊ ಫುಗ್ಡಿ - ಅನೇಕ ತರಗಳಿವೆ. ಕೆಪೆಂ ತಾಲೂಕಿನ 'ಕ್ರಿಶ್ಚಿಯನ್ ಗಾವ್ಡೆ' ಸಮುದಾಯದವರು 'ಧಾಲೊ ಆಡುತ್ತಾರೆ. ಹಾಡುಗಳನ್ನು ನೃತ್ಯಗಾತಿ ಸ್ತ್ರೀಯರೇ ಹಾಡುತ್ತಾರೆ. ಹಿಮ್ಮೇಳ ವಾದ್ಯವಾಗಿ ಟೆ' ಗಳೇ ನೃತ್ಯದಲ್ಲಿ ಹೆಚ್ಚು ಬಳಸಲ್ಪಡುತ್ತವೆ.

**ದಾಂಡ್ಲಾಂ ಖೆಳ್ :** ಮಡ್ಗಾಂವ್ ಹತ್ತಿರದ 'ಆರ್ಲೆಂ' ವಠಾರದಲ್ಲಿ 'ಕ್ರಿಶ್ಚಿಯನ್ ಗಾವ್ಡೆ' ದಾಯದವರು 'ದಾಂಡ್ಲಾಂ ಖೆಳ್' ಪ್ರಕಾರವನ್ನು ಆಡುತ್ತಾರೆ. ಸಮಸಂಖ್ಯೆಯ ಪುರುಷರು ಾರರಾಗಿ ಇರುತ್ತಾರೆ. ಆದರೂ ಎರಡನೇ ಜೊತೆಗಾರ ಪುರುಷ, ಸಂಪೂರ್ಣ ೇಷದಲ್ಲಿರುತ್ತಾನೆ. ಪುರುಷ ವೇಷಧಾರಿ ಸೊಂಟಕ್ಕೆ ಶಾಲು ಸುತ್ತಿ, ಅದರ ಮೇಲೆ ಕೆಂಪು ಉಟ್ಟು, ತಲೆಗೆ ರುಮಾಲು ಧರಿಸಿರುತ್ತಾನೆ. ಮೊದಲು 'ಮಾಂಡ್' ನಲ್ಲಿ, ಆಮೇಲೆ ಮನೆಯ ಅಂಗಳಗಳಲ್ಲಿ ಆಡುತ್ತಾರೆ. ನೃತ್ಯಗಾರನ ಬಲಗೈಯಲ್ಲಿ ಎರಡೂವರೆ ಇಂಚು ಮತ್ತು ಸುಮಾರು ನಾಲ್ಕು ಅಡಿ ಉದ್ದದ ಉರುಟಾದ ದಂಡವಿದ್ದು ಹಾಡು ಮತ್ತು ಸರಿಯಾಗಿ ವಿವಿಧ ಶೈಲಿಗಳಲ್ಲಿ ಆಡುತ್ತಾರೆ. ಹಿಮ್ಮೇಳ ವಾದ್ಯಗಳಲ್ಲಿ ಝುಂಜ್ ತಾಳ, ಳೆ ಮತ್ತು 'ಗುಮಟೆ' ಗಳನ್ನು ಬಳಸುತ್ತಾರೆ.

**ಮುಸಳಾಂ ಘೆಳ್ :** 'ಮುಸಳಾಂ ಘೆಳ್' (ಮುಸಲ ನೃತ್ಯ) ಪೂರ್ವದಲ್ಲಿ ಹಿಂದೂ ವಿಧಿ ೆ ಪ್ರದರ್ಶಿಸಲ್ಪಡುತ್ತಿತ್ತು. ಈಗ ಚಾಂದೋರ್ ಪರಿಸರದ ಕ್ರಿಶ್ಚಿಯನ್ನರು ಕಾರ್ನಿವಾಲ್‌ನ ನೇ ದಿವಸ ಆಡುವ ಸಂಪ್ರದಾಯವನ್ನು ಪಾಲಿಸುತ್ತಿದ್ದಾರೆ. ಗೋವಾದಲ್ಲಿ ಕದಂಬ ರಾಜರ (980-1005) ಕಾಲದಲ್ಲಿ ಈ ನೃತ್ಯ ಪ್ರಚಲಿತವಿತ್ತು ಅಂತ ಚರಿತ್ರಕಾರರ ಅಭಿಪ್ರಾಯ. ) ರಲ್ಲಿ ವಿಜಯನಗರದ ಹರಿಹರ ರಾಜಕುಮಾರನು ಚೋಳ ರಾಜನನ್ನು ಗೆದ್ದ ಮಾಚರಣೆಗೆ ಚಂದ್ರಾಪುರ ಕೋಟೆ ಬಾಗಿಲಿನಲ್ಲಿ ಈ ನೃತ್ಯದ ಪ್ರಥಮ ಪ್ರಯೋಗವಾಯಿತು ಇನ್ನೊಂದು ನಂಬಿಕೆಯೂ ಇದೆ.

ನೃತ್ಯಕಾರರು ಯಾದವ ಶೈಲಿಯ ಪೋಷಾಕು ಧರಿಸುತ್ತಾರೆ. ವಿಶೇಷವೆಂದರೆ ಹಿಂದೂ

ಧಾರ್ಮಿಕ ಲಕ್ಷಣಗಳಿರುವ ಈ ನೃತ್ಯವನ್ನು 'ಕ್ರಿಶ್ಚಿಯನ್ ಚಾರ್ಡೆ (ಕ್ಷತ್ರಿಯ) ಸಮುದಾಯದವರು ಕಾರ್ನಿವಾಲ್ ಉತ್ಸವದ ಸಂದರ್ಭ ಆಡುತ್ತಾರೆ. ಚಾಂದೊರ್‌ನ ಪುರುಷ ಚಾರ್ಡಿ ಕ್ರಿಶ್ಚಿಯನ್ನರು ಧೋತಿ ಉಟ್ಟು, ತಲೆಗೆ ಪಗ್ಡಿ ಸುತ್ತಿ, ವರ್ತುಲಾಕಾರದಲ್ಲಿ ನಿಂತುಕೊಂಡು ಆಡುತ್ತಾರೆ. ಈ ಕಲಾಪ್ರಕಾರದಲ್ಲಿ ಒನಕೆಗಳನ್ನು ಹಿಡಿದುಕೊಂಡು ವಾದ್ಯಗಳ ತಾಳಕ್ಕೆ ಸರಿಯಾಗಿ ಭೂಮಿಯನ್ನು ಕುಟ್ಟುತ್ತಾ ಕುಣಿಯುವುದರಿಂದ ಇದು 'ಮುಸಳಾಂಘೆಳ್ (ಮುಸಲ ನೃತ್ಯ) ಅಂತ ಪ್ರಸಿದ್ಧ. ಹಿಮ್ಮೇಳದಲ್ಲಿ ಘೋಲು, ಕಂಸಾಳೆ, ಝಂಜ್ ತಾಳ ಮತ್ತು 'ಗುಮಟೆ'ಗಳನ್ನು ನುಡಿಸುತ್ತಾರೆ.

**ರಣಮಾಲೆ :** ಗೋವಾದ ಸತ್ತರಿಂ, ಸಾಂಗೆಂ ಮತ್ತು ಗೋವಾ ಕರ್ನಾಟಕ ಗಡಿ ಪ್ರದೇಶಗಳಲ್ಲಿ, ಹೋಳಿ ಉತ್ಸವ ಸಂದರ್ಭದಲ್ಲಿ ಪ್ರದರ್ಶಿಸಲ್ಪಡುವ 'ರಣಮಾಲೆ' ಎಂಬ, ಪುರುಷರು ಮಾತ್ರ ಪಾತ್ರವಹಿಸುವ ಸ್ವತಂತ್ರ ಜಾನಪದ ಪ್ರಕಾರ ಪ್ರಚಲಿತವಿದೆ. ಇದು ಎರಡು ವಿಧಾನಗಳಲ್ಲಿ ಪ್ರದರ್ಶಿಸಲ್ಪಡುತ್ತದೆ. ಪ್ರಥಮವಾಗಿ, ಕುಣಿತ ಮತ್ತು 'ಜತ್' ಎಂಬ ಹಾಡುಗಳಿಂದ ಕೂಡಿದ ಪ್ರದರ್ಶನದಲ್ಲಿ ಮೊದಲು ರಾಮಾಯಣದ ಕಥಾ ಸಾದರೀಕರಣವಾಗುತ್ತಿರುವಾಗ ಮಧ್ಯೆ ಮಧ್ಯೆ ಕಥೆಗೆ ಸಂಬಂಧಪಟ್ಟ ಪಾತ್ರಗಳು ವೇದಿಕೆಗೆ ಬಂದು ಪ್ರಸಂಗಗಳಿಗೆ ಅನುಗುಣವಾಗಿ ಮೂಕಾಭಿನಯದಲ್ಲಿ ತೊಡಗುತ್ತವೆ. ಈ ಪಾತ್ರಗಳಿಗೆ 'ಸವಂಗಾಂ' ಅಂತ ಹೆಸರು.

ದ್ವಿತೀಯವಾಗಿ, ರಾಮಾಯಣದ ವಿವಿಧ ಖಂಡಗಳ ಕಥೆ ಸಾಗುತ್ತಿರುವಾಗ ನಡುವೆ 'ಧೊಂಗಾ' ಎಂಬ ಸಾಮಾಜಿಕ ವೇಷಗಳು ಪ್ರವೇಶಿಸಿ, ಹಾಸ್ಯ ಭರಿತ ವಿವಿಧ ಆಂಗಿಕ ಅಭಿನಯಗಳನ್ನು ಪ್ರದರ್ಶಿಸುತ್ತಾರೆ. ಈ ಪಾತ್ರಗಳು ಮೌನವಾಗಿರದೆ, ರಾಮಾಯಣದ ಕಥೆಯ ಸಾದರೀಕರಣದ ಗಂಭೀರ ವಾತಾವರಣವನ್ನು, ತಮ್ಮ ಹಾಡು, ಹಾಸ್ಯಭರಿತ ಮಾತು ಹಾಗೂ ಅಭಿನಯಗಳಿಂದ ತಿಳಿಗೊಳಿಸಿ, ಪ್ರೇಕ್ಷಕರನ್ನು ನಗಿಸಿ, ಮನೋರಂಜನೆ ನೀಡುತ್ತಾರೆ. ಈ ಕಲಾಪ್ರದರ್ಶನದ ಹಿಮ್ಮೇಳ ವಾದ್ಯಗಳಲ್ಲಿ ಶಹನಾಯ್, ಸಮ್ಮೇಳ, ಘೋಲು, ತಾಸೆ, ಕಂಸಾಳೆಗಳೊಂದಿಗೆ 'ಗುಮಟೆ' ಕೂಡಾ ಪ್ರಮುಖ ವಾದ್ಯವಾಗಿ ಬಳಸಲ್ಪಡುತ್ತದೆ.

**ಪಾಲ್ಖಿ :** ದಕ್ಷಿಣ ಗೋವಾದಲ್ಲಿ ಹುಣ್ಣಿಮೆಯ ಐದು ದಿವಸ ಮೊದಲು, ಅಂದ್ರೆ, ಫಾಲ್ಗುಣ ನವಮಿಯಿಂದ ಪ್ರಾರಂಭವಾಗಿ, ಫಾಲ್ಗುಣ ಹುಣ್ಣಿಮೆಯಂದು ಕೊನೆಗೊಳ್ಳುವ 'ಧಾಕ್ಟೊ ಶಿಗ್ಮೊ' ಮತ್ತು ಉತ್ತರ ಗೋವಾದಲ್ಲಿ ಫಾಲ್ಗುಣ ಹುಣ್ಣಿಮೆಯಿಂದ 'ಗುಡಿ ಪಾಡ್ವಾ' ವರೆಗೆ 'ವ್ಹಡ್ಲೊ ಶಿಗ್ಮೊ' ಹೋಳಿ ಉತ್ಸವ ದೇವಸ್ಥಾನಗಳಲ್ಲಿ ಜರಗುತ್ತದೆ. ನಿಶ್ಚಯಿಸಿದ ದಿವಸ ದೇವರ ಪಾಲ್ಖಿ ಹೊರಡುತ್ತದೆ. ಪಾಲಖಿಯೆದುರು ಪ್ರತಿದಿನ ನೃತ್ಯನಾಟಕಗಳು ಹಾಗೂ ಚಂದ್ರಾವಳ್, ಫಾಗ್, ಖಾಣಪದ್ ಎಂಬ ಗಾನ ವಾದ್ಯಗಳಿಂದ ಕೂಡಿದ ಸುವಾರಿ ಗಾನವಾದ್ಯ ಮೇಳ ಜರಗಿಸಲ್ಪಡುತ್ತದೆ. ಈ ವಾದ್ಯ ಮೇಳದಲ್ಲಿ ಸಮ್ಮೇಳ, ಧೋಲು, ಝಂಜ್ ತಾಳ,

ೆಗಳೊಂದಿಗೆ ಪ್ರಮುಖ ವಾದ್ಯವಾಗಿ 'ಗುಮಟೆ' ಯನ್ನು ಬಳಸುತ್ತಾರೆ.

ಸುವಾರಿ : ಸುವಾರಿ ಅಂದ್ರೆ ಒಂದು ರೀತಿಯ ವಾದ್ಯಮೇಳ ( ಜುಗಲ್‌ಬಂದಿ) ಹುದು. ಇದರಲ್ಲಿ ಸಾಹಿತ್ಯವಿರುವುದಿಲ್ಲ. ಬದಲಿಗೆ ವಾದ್ಯ ಪರಿಕರಗಳು ಮಾತ್ರ ರೋಗವಾಗುತ್ತವೆ. ಈ ಪ್ರಕಾರವನ್ನು ಹೆಚ್ಚಾಗಿ ಮೆರವಣಿಗೆಗಳಲ್ಲಿ ಕಾಣಬಹುದು. ೆಗಳಲ್ಲಿ ಮೇಳ ಜರಗುವ ಸಂದರ್ಭಗಳಿವೆ. ಗೋವಾ, ಕಾರವಾರಗಳಲ್ಲಿ ಕೊಂಕಣಿ ರ ಪೂಜಾ ಪುರಸ್ಕಾರಗಳ ಸಂದರ್ಭ, ಗಣೇಶೋತ್ಸವಗಳಲ್ಲಿ ಕಾಣಸಿಗುತ್ತದೆ. ಸಮ್ಮೇಳ, ಯ್, ತಾಳ, ಮುಂತಾದ ವಾದ್ಯಗಳೊಂದಿಗೆ 3-4 ಜನ ಗುಮ್ಮಟೆ ನುಡಿಸುವ ಈ ಕ್ಕೆ 'ಗುಮಟಾ ಸುವಾರಿ' ಅಂತಲೂ ಹೆಸರಿದೆ.

ಗುಮ್ಟಾಂ ಆರತಿ ಸರ್ತ್ (ಸ್ಪರ್ಧೆ ) : ಚೌತಿ ಹತ್ತಿರ ಹತ್ತಿರ ಬರುವಾಗ ಗೋವಾದಲ್ಲಿ ಾ ಪ್ರದೇಶಗಳಲ್ಲಿ ಗುಮಟೆ ಆರತಿ ಅಭ್ಯಾಸದ ಶಬ್ದ ಕೇಳಲು ಶುರುವಾಗುತ್ತದೆ. ಯ್ ತಿಂಗಳ ರಾತ್ರಿಗಳಲ್ಲಿ ಗುಮಟೆ ಆರತಿ ಕಲಿಯುವ ಯುವ ಜನಾಂಗ ಗುಮಟೆ ತರ ಮಾರ್ಗದರ್ಶನದಲ್ಲಿ ತರಬೇತಿ ಪಡೆಯುತ್ತಾರೆ. ಈ ತರಬೇತಿ ಪಡೆಯುವಲ್ಲಿ ಳೆಯರು ಮತ್ತು ಹೆಣ್ಮಕ್ಕಳೂ ಮುತುವರ್ಜಿ ವಹಿಸುತ್ತಿರುವುದು ಒಳ್ಳೆಯ ಲಕ್ಷಣ.

ಗುಮಟೆ ಗೋವಾದ ಜನತೆಯ ಒಗ್ಗಟ್ಟಿನ ಪ್ರತೀಕ ಎಂತೋ, ಅಂತೆಯೇ ಗೋವಾದ ಕ ಕಲೆಯ ಅವಿಭಾಜ್ಯ ವಾದನಸಾಧನ ಕೂಡಾ. ಒಂದು ಕಾಲದಲ್ಲಿ ಗುಮಟೆ, ಸಮ್ಮೇಳ, ಳೆ, ಝುಂಜ್ ತಾಳ - ಈ ವಾದ್ಯಸಾಧನಗಳು ಇತಿಹಾಸದಲ್ಲಿ ಅಳಿದು ಹೋಗುವಂತಹ ತಿ ಇತ್ತು. ಗೋವಾ ಸರಕಾರವು ರಾಜ್ಯಮಟ್ಟದಲ್ಲಿ ಗುಮಟೆ ಆರತಿ ಸ್ಪರ್ಧೆಗಳನ್ನು ದೊಡ್ಡ ದಲ್ಲಿ ಪ್ರಾರಂಭಿಸಿದ್ದರಿಂದಾಗಿ ಗುಮಟೆ ಕಲೆಗೆ ಒಳ್ಳೆಯ ದಿನಗಳು ಬಂದವು ಅನ್ನಬಹುದು. ರ ಪೀಳಿಗೆಯವರು ಸ್ವಾಭಾವಿಕವಾಗಿ ಪಾಶ್ಚಾತ್ಯ ಸಂಗೀತಕ್ಕೆ ಆಕರ್ಷಿತರಾಗುತ್ತಾರೆ. ಆದರೆ ಟೆ ಆರತಿ ಸ್ಪರ್ಧೆಗಳು ಪ್ರಾರಂಭವಾದಂದಿನಿಂದ ಆ ಆಕರ್ಷಣೆ ಗುಮಟೆ ಕಡೆಗೆ ತಿರುಗಿದೆ ು ಗುಮಟೆ ತಜ್ಞರ ಹೇಳಿಕೆ. ಗೋವಾದ ಈ ಕಲೆ ಪ್ರತೀ ಮನೆಮನೆಗಳಲ್ಲಿ ವಾಡೆ ಗಳಲ್ಲಿ, ಊರು ಕೇರಿಗಳಲ್ಲಿ ಅರಳಿ, ಸಮಾಜದಲ್ಲಿ ಈ ಲೋಕಕಲೆಯ ಪ್ರಸಾರವಾಗಿ, ೆ ಪದ್ಧತಿಯಿಂದ, ಪರಂಪರಾಗತ ಕಲೆಯ ಮೂಲ ಗೌರವ, ಸ್ಥಾನಮಾನಗಳಿಗೆ ಕುಂದು ಾಗದ ಶಾಸ್ತ್ರ ಶುದ್ಧ ರೀತಿಯಲ್ಲಿ ಅಬ್ಯಾಸಕ್ಕೆ ತೊಡಗುವ ಅವಶ್ಯಕತೆಯಿದೆ.

ಪ್ರಸ್ತುತ ಗೋವಾದಲ್ಲಿ ಸ್ಪರ್ಧೆಗಳಿಗಾಗಿ ಗುಮಟೆ ಕಲಿಯುವ ಉತ್ಸಾಹ ಯುವ ೆಯವರಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. ಗುಮಟೆ ಆರತಿ ಸ್ಪರ್ಧೆಯ ಹೊಸ ತಂಡಗಳೂ ಅಣಬೆ ಮೊಳೆಯುವ ರೀತಿ ಹುಟ್ಟಿಕೊಂಡಿವೆ. ಈ ಸ್ಪರ್ಧಾ ತಂಡಗಳ ವೈಮನಸ್ಯಗಳೂ ಸೃಷ್ಟಿಯಾಗಿರುವುದರಿಂದ ಒಳ್ಳೆಯ ಪ್ರತಿಭಾವಂತ ಕಲಾವಿದರಿಗೆ ಯವಾಗುತ್ತಿರುವುದೂ ಕಂಡುಬರುತ್ತಿದೆ. ಕೆಲವು ತಂಡದವರು ತೀರ್ಪುಗಾರರೊಂದಿಗೆ

ವಶೀಲಿ ಮಾಡಿ ಫಿಕ್ಸಿಂಗ್ ಮಾಡುವುದು, ಸ್ಪರ್ಧಾ ಆಯೋಜಕರೊಂದಿಗೆ ತಕರಾರು ಮಾಡುವುದೂ ನಿತ್ಯ ಪರಿಪಾಠವಾಗಿದೆ. ಬಹುಮಾನದ ಮೊತ್ತದಲ್ಲಿ 50 ಶೇಕಡಾ ತಂಡಕ್ಕೆ ಮತ್ತು 50 ಶೇಕಡಾ ತೀರ್ಪುಗಾರರಿಗೆ ಪಾಲಾಗುವಾಗ ಪರಿಣತ ಹಾಗೂ ಒಳ್ಳೆಯ ಪ್ರದರ್ಶನ ನೀಡುವ ಕಲಾಕಾರರಿಗೆ ಅನ್ಯಾಯವಾಗುತ್ತಿದೆ ಎಂಬುದಾಗಿ ತಜ್ಞರ ಕಳವಳ. ಬಹುಮಾನಗಳಿಗಾಗಿ ಜಗಳಾಡದೆ, ತೀರ್ಪುಗಾರರೂ ಫಿಕ್ಸಿಂಗ್ ಅವ್ಯವಹಾರಗಳಲ್ಲಿ ತೊಡಗದೇ ಶಿಸ್ತು ಬದ್ಧ ಸ್ಪರ್ಧೆಗಳು ಜರಗಿದಲ್ಲಿ ಗುಮಟೆ ಕಲೆಯ ಪರಂಪರೆಯ ಸಂಸ್ಕೃತಿ ಉಳಿಸಿಕೊಳ್ಳುವಲ್ಲಿ ಒಳ್ಳೆಯ ಭವಿಷ್ಯವಿದೆ ಎಂಬುದು ತಜ್ಞರ ಅಭಿಪ್ರಾಯ.

ಪ್ರಕೃತ ಗೋವಾದ ಹಿಂದೂ ಕುಡುಬಿ, ಕ್ರಿಶ್ಚಿಯನ್‌ಮತ್ತು ಇತರ ಸಮುದಾಯದವರು ಶಿಗ್ಮೋತ್ಸವಗಳಲ್ಲಿ, ಚೌತಿ, ಕಾರ್ನಿವಾಲ್, ದೇವಸ್ಥಾನಗಳ ಮತ್ತು ಸಾಮಾಜಿಕ ಉತ್ಸವಾದಿ ಸಂದರ್ಭಗಳಲ್ಲಿ ತಾಳವಾದ್ಯವಾಗಿ ಗುಮಟೆಯನ್ನು ಉಪಯೋಗಿಸುತ್ತಾರೆ. ಆದರೆ ಈ ಸಂದರ್ಭಗಳಲ್ಲಿ ಇತರ ಆಧುನಿಕ ಸುಧಾರಿತ ಸಾಧನಗಳೊಂದಿಗೆ ಗುಮಟೆಯನ್ನು ಒಂದು ಪೂರಕ ವಾದ್ಯವಾಗಿ ಸಾಂಕೇತಿಕ ರೂಪದಲ್ಲಿ ಮಾತ್ರ ಉಪಯೋಗಿಸುತ್ತಿರುವುದು ಬಹಳ ಬೇಸರದ ಸಂಗತಿ. ಗೋವಾದಲ್ಲಿ ಪಾಶ್ಚಾತ್ಯ ಸಂಗೀತೋಪಕರಣಗಳ ಪ್ರಭಾವ ಜಾಸ್ತಿಯಾಗುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಇದೇ ವೇಳೆ ಗೋವಾ ಮೂಲದಿಂದಲೇ ವಲಸೆ ಬಂದು ಕರ್ನಾಟಕದಲ್ಲಿ ನೆಲೆನಿಂತಿರುವ ಕುಡುಬಿ ಜನಾಂಗದವರು ಹೋಳಿಯ ಶಿಗ್ಮೋತ್ಸವಕ್ಕೆ ಗುಮಟೆಗಳ ಜಾತ್ರೆಯನ್ನೇ ಜರಗಿಸುತ್ತಿರುವುದು ಅಭಿಮಾನದ ಹಾಗೂ ಹೆಮ್ಮೆಯ ವಿಷಯವಾಗಿದೆ.

**ಉಪಸಂಹಾರ :**

ಇತ್ತೀಚೆಗೆ ನಾವು ಗಮನಿಸುತ್ತಿರುವಂತೆ, ದೊಡ್ಡ ದೊಡ್ಡ ತಲೆಬರಹದ ಕೊಂಕಣಿ ಉತ್ಸವಗಳಲ್ಲಿ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಒಂದು ಗುಮಟೆಯನ್ನು ಪ್ರದರ್ಶಿಸಿ ಪ್ರೇಕ್ಷಕರ ಸಮ್ಮುಖ ಆ ಗುಮಟೆಯನ್ನು ನುಡಿಸಿ, ಕಾರ್ಯಕ್ರಮ ಉದ್ಘಾಟಕರ ಕೊರಳಿಗೆ ತೊಡಿಸಿ, ಬ್ಯಾನರ್ ಬರೆದು, ಗುಮಟೆಯ ಸುಂದರವಾದ ಫೋಟೊ ಚಿತ್ರಿಸಿದ ಬ್ರೋಶರ್‌ಗಳನ್ನು ಮುದ್ರಿಸಿ, ಪುಸ್ತಕಗಳ ಮುಖಪುಟದಲ್ಲಿ ಕಂಪ್ಯೂಟರೀಕೃತ (Collage) ಆಕರ್ಷಕ ಚಿತ್ರ ಹಾಕಿ - ' ಇದು ಗುಮಟೆ, ನಮ್ಮ ಪೂರ್ವಿಕರ ಬಳುವಳಿ, ಕೊಂಕಣಿ ಸಂಸ್ಕೃತಿಯ ಸಂಕೇತ, ಕೊಂಕಣಿ ಕಾರುಭಾರಿಗಳ ಆಸ್ತಿ ಇದನ್ನು ನಾವು ಉಳಿಸಬೇಕು' ಅಂತ ಬಾಯಿಯಲ್ಲಿ ಗುಮಟೆ ಬಾರಿಸಿದರೆ, ಗುಮಟೆಯನ್ನು ನಾವು ಫೋಟೋಗಳಲ್ಲಿ ಮಾತ್ರ ಉಳಿಸಲು ಶಕ್ತರಾದೇವು.

ಗುಮಟೆ ಕಲೆಯನ್ನು ಇತರ ಸಮಾಜದ ಜನರು, ಸಂಘ ಸಂಸ್ಥೆಗಳವರು ನಕಲು ತೆಗೆದು ಪ್ರದರ್ಶನಗಳನ್ನು ನೀಡಲು ಪ್ರಾರಂಭಿಸುವ ಮೊದಲು, ಆ ಮೂಲಕ ಗುಮಟೆಯನ್ನು ತಮ್ಮದಾಗಿಸಿಕೊಳ್ಳುವ ಮೊದಲು, ಪರಂಪರಾಗತವಾಗಿ ಗುಮಟೆಯನ್ನು ಉಪಯೋಗಿಸಿದ

ಾಯದವರು ಜಾಗೃತರಾಗಬೇಕು. ಹಾಗೆ ಇತರರು ನೀಡುವ ಪ್ರದರ್ಶನಗಳು ಛದ್ಮವೇಷ y Dress) ಆದೀತೇ ಹೊರತು ಅಭಿಜಾತ, ಅಸಲಿ ಕಲೆಯಾಗಲಿಕ್ಕಿಲ್ಲ.

ಂದು ಸಂಗೀತ ಸಾಧನವಾಗಿ ಗುಮಟೆಯ ಉಪಯೋಗ ಮತ್ತು ಮಹತ್ವಗಳ ಳನ್ನು ಈ ಪುಸ್ತಕದಲ್ಲಿ ಕೊಡಲಾಗಿದೆ.ಚರ್ಮವಾದ್ಯಗಳ ಪೈಕಿ ಗುಮಟೆಗೆ ಅದರದ್ದೇ ೌರವದ ವಿಶಿಷ್ಟ ಸ್ಥಾನವಿದೆ. ನಮ್ಮ ಪರಿಸರದಲ್ಲಿ ಯಾವ ಸಮುದಾಯದ ಜನರು ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಾರಂಭಗಳ ಸಂದರ್ಭಗಳಲ್ಲಿ ೆಯನ್ನು ಖಡ್ಡಾಯವಾಗಿ ಉಪಯೋಗಿಸಿದ್ದಾರೊ - ಆ ಜನಾಂಗದವರು ಈ ಕಲೆಯನ್ನು ಬೆಳೆಸಿದ್ದಾರೆ ಮತ್ತು ಮುಂದಕ್ಕೂ ಉಳಿಸುತ್ತಾರೆ.

ಪ್ರಾರಂಭದಲ್ಲಿ ವಿದೇಶೀ ಮತಾಂಧರು ಗುಮಟೆ ಕಲೆಯನ್ನು ಕಾಟು ಜನರ ಕಲೆ, ಪೈಶಾಚಿಕ ಅಂತ ನಿರ್ಬಂಧಿಸಿದರು, ಗುಮಟೆಯನ್ನು ಕಿತ್ತೊಗೆದರು. ಗುಮಟೆಕಾರರ ಹೃದಯ ದರು. ಗುಮಟೆಕಾರರು ಅಳುವಂತೆ ಮಾಡಿದರು. ಕೊನೆಗೆ ಮೂಲ ನೆಲೆ ಗೋವಾದಿಂದಲೇ ೋಡಿಸಿದರು. ಆ ನಂತರದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಯಿಂದಾಗಿ ೆ ಮೂಲೆ ಸೇರಿತು. ತಂತ್ರಜ್ಞಾನ ಪ್ರಗತಿಯಾಗುತ್ತಾ ಬರುವಾಗ ಜಾಗತೀಕರಣದ ದಿಂದ ಗುಮಟೆಯನ್ನು ಬಳಸುವುದು ಯಾರಿಗೂ ಬೇಡವಾಯಿತು. ಸುಲಭಧಲ್ಲಿ ಗುವ, ಜಾಸ್ತಿ ಬಾಳಿಕೆ ಬರುವ ಸುಧಾರಿತ ಆಧುನಿಕ ಸಾಧನಗಳು ಲಭ್ಯವಾಗುವಾಗ, ಂದ ತಯಾರಿಸಲ್ಪಟ್ಟ ಅನಾಕರ್ಷಕ ಗುಮಟೆಯನ್ನು ಉಪಯೋಗಿಸುವುದು ತಮ್ಮ ೆ ಗೌರವಗಳಿಗೆ ಕುಂದು ಎಂಬ ಕೀಳರಿಮೆ ಬಾಧಿಸಿದಾಗ ಧಾರ್ಮಿಕ, ಸಾಮಾಜಿಕ, ತಿಕ ಆಚರಣೆಗಳ ಚೌಕಟ್ಟಿನ ಪರಿಧಿಯೊಳಗೆ ಗುಮಟೆಗಳಿಗೆ ಅವಕಾಶ ನೀಡದ ಾಯುಗಳಲ್ಲಿ, ಧರ್ಮ ಮತ್ತು ಈ ಕಲೆಯ ನಡುವಿನ ಕೊಂಡಿ ಕಳಚಿದ ಕಾರಣ, ಆ ದಲ್ಲಿ ಗುಮಟೆ ಕಲೆ ಅಳಿಯಿತು. ಅಂತಹ ಸಮಾಜದಲ್ಲಿ ಇನ್ನು ಮುಂದಕ್ಕೂ ುತ್ತದೆ.

ಗುಮಟೆ ಕಲೆಯು ಮಾನವನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪುರಾತನ ಕಲೆ. ಕ, ಸಾಮಾಜಿಕ, ಸಾಂಸ್ಕೃತಿಕ ಆಚರಣೆಗಳಲ್ಲಿ ಮಾತ್ರವಲ್ಲ, ಇತರ ವೇಳೆಗಳಲ್ಲೂ ನಮ್ಮ ಮಕ್ಕಳಿಗೆ, ಎಳವೆಯಲ್ಲಿಯೇ ಇದರ ಔಚಿತ್ಯವನ್ನು ಮನವರಿಕೆ ಮಾಡಿಕೊಟ್ಟು, ವಾದನ ಮತ್ತು ತತ್ಸಂಬಂಧವಾದ ನೃತ್ಯಗಾರಿಕೆಯನ್ನು ಕಲಿಸಿಕೊಡಬೇಕು. ಕೇವಲ ು ಅಶಿಕ್ಷಿತ ಜನಾಂಗ ಮಾತ್ರವಲ್ಲ, ವಿದ್ಯಾವಂತ ಯುವಕರಲ್ಲೂ, ಕೀಳರಿಮೆಯ ಯನ್ನು ಹೋಗಲಾಡಿಸಿ, ಕಲಾಭಿರುಚಿ ಕಲಾಭಿಮಾನ ಉಂಟಾಗುವಂತೆ ಪ್ರೋತ್ಸಾಹ ಲಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದರೆ , ಮುಂದಿನ ಪೀಳಿಗೆಗೆ ಈ ಕಲೆಯನ್ನು ದಂತಾಗುತ್ತದೆ. ಉಳಿಸಬಹುದು.



# ಪರಾಮರ್ಶನ ಗ್ರಂಥ ಸೂಚಿ


1. ಕನ್ನಡ ನಿಘಂಟು - ಕನ್ನಡಸಾಹಿತ್ಯ ಪರಿಷತ್ ಬೆಂಗಳೂರು - III ಸಂಪುಟ
2. ತುಳು ನಿಘಂಟು - ಸಂಪುಟ III - ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ - 1995
3. ಕರ್ನಾಟಕ ಜನಪದ ಕಲೆಗಳ ಕೋಶ - ಕನ್ನಡ ವಿಶ್ವವಿದ್ಯಾನಿಲಯ ಹಂಪಿ - 1996
4. ಕರ್ನಾಟಕ ಬುಡಕಟ್ಟುಗಳು - ಸಂಪುಟ 1 : ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ - 1998
5. ರಾಮಭಟ್ ಸಜಂಗದ್ದೆ - ಉದಯವಾಣಿ ಮೆಗಝೀನ್ 3-3-1996
6. ಡಾ| ಎನ್. ತಿರುಮಲೇಶ್ವರ ಭಟ್ - ಉದಯವಾಣಿ 21-12-2001 (ಬುರ್‍ರಕಥಾ)
7. ರಾಕ್ಣೊ - 60 - ಅಂಕೊ 1998
8. ಚಾ .ಫ್ರಾ. ದೆ 'ಕೊಸ್ತಾ - ಜಿವಿತ್ ಕೊಂಕಣಿ ಪತ್ರ - ಮೇ 1983 ಪುಟ 30-31
9. ಕೊಂಕ್ಣಿ ಲೋಕ್‌ವೆದ್-ಕೊಂಕಣಿ ಸಂಸ್ಥೆ, ಸೈಂಟ್ ಎಲೋಶಿಯಸ್ ಕಾಲೇಜ್, ಮಂಗಳೂರು - ಕೊಂಕಣಿ ಡಿಪ್ಲೋಮಾ ಕರೆಸ್ಪಾಂಡೆನ್ಸ್ ಕೋರ್ಸ್ ಎರಡನೇ ವರ್ಷದ ನೋಟ್ಸ್ - ಪುಸ್ತಕ 2 ಅಂಕೆ 2
10. ಸಿರಿಲ್ ಮಾಡ್ತಾ - 'ಕೊಂಕಣಿ ದಾಯ್ಜ್' ಲೇಖನ - ಅಮರ್ ಕೊಂಕ್ಣಿ 1974 - ರಾಕ್ಣೊ ಪ್ರಕಾಶನ, ಮಂಗಳೂರು
11. ವಿ.ಡಿ. ಸಿಲ್ವಾ ಕಾಂಜೂರ್ ಮಾರ್ಗ್ 'ಆಮ್ಚಿಂ ಅದ್ಲಿಂ ಕಾಜಾರಾಂ ' -2002
12. ಪ್ರೊ. ಬೆನೆಟ್ ಪಿಂಟೊ -Konkani Bards and Musicians of Kanara - 2003
13. ಫ್ರಾನ್ಸಿಸ್ ಜೆ. ಹರ್ನೊಡ್‌ಕರ - 'ಸಿದ್ಧಿ ಲೋಕ್‌ಗೀತ್ ಸಂಗ್ರಹ್' _ ಪ್ರ : ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು - 2007
14. ಸುರೇಶ್ ತಾಂಡೇಲ್ - 'ಖಾರ್ವಿ ಲೋಕ್ ಗೀತ್ ಸಂಗ್ರಹ್' - ಪ್ರ : ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು - 2007
15. ಪೂವಪ್ಪ ಕಣಿಯೂರು - ಉದಯಾಣಿ 28-2-1988

'ವೊಗ್ರೆಂ ಕಾರಣ್' - ಪಾವ್ಲ್ ವೊರಾಸ್ - ಪಡ್ವಳ್ ಪ್ರಕಾಶನ, ಮಂಗಳೂರು - 2008

ಪ್ರವೋದ್ ಮಹಾದೇಶ್ವರ್ ಗೋವಾ 'ಪ್ರಬಂಧ' ಗೊಂಯ್ಚಿ ಪಾರಂಪರಿಕ್ ಲೋಕ್‌ನಾಟ್ಯ್ ಕಲಾ -2008

ಸುನಾಪರಂತ್ ತಾ. 7-7-2010

ಪ್ರೊ. ಎ. ವಿ. ನಾವಡ - 'ಕೊಂಕಣದ ಕುಡುಬಿಯರು' ಪ್ರ : ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು - 2008





## ಅನುಬಂಧ - 1



ಸೇಸು ಮೇಸ್ತ್ರಿ ಕೊಂಪದವು

ದಕ್ಷಿಣ ಕನ್ನಡದಲ್ಲಿ ಕಾರ್ಕಳದಿಂದ ಕೊಣಾಜೆವರೆಗೆ ಇರುವ ಸುಮಾರು 25 ಕುಡುಬಿ ಕೂಡುಕಟ್ಟುಗಲ್ಲಿ ಪ್ರಥಮ ಗೌರವದ ಕೂಡುಕಟ್ಟು ಕೊಂಪದವು ಗ್ರಾಮ. ಈ ಕೂಡುಕಟ್ಟಿಗೆ ಸಂಬಂಧಪಟ್ಟ ಸುಮಾರು 350-400 ಕುಟುಂಬಗಳಿದ್ದು ಗ್ರಾಮದಲ್ಲಿ ಹೆಚ್ಚಿನ ಜನಸಂಖ್ಯೆ ಕುಡುಬಿಯರದ್ದು. ಸಾಂಪ್ರದಾಯಿಕ ಗುಮಟೆ ಕೋಲಾಟ ನೃತ್ಯದೊಂದಿಗೆ ಕಂಗುಸುಟ್ಟು, ಹೋಳಿಯ ಕಾಮದಹನ ಜರಗುವುದು ಇಲ್ಲಿ ಮಾತ್ರ.

ಕೊಂಪದವಿನ 'ಮೊರ್ಲೆಡೆ' ಎಂಬಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ತೀರಾ ಹಿಂದುಳಿದ ಕುಡುಬಿ ಸಮುದಾಯದಲ್ಲಿ ಮುಂಡಗೌಡ ಭಾಗೀರಥಿ ಬಾಯಿ ದಂಪತಿಗಳಿಗೆ ಏಕಮಾತ್ರ ಪುತ್ರರಾಗಿ ಸೇಸು ಮೇಸ್ತ್ರಿಯವರು ಜನಿಸಿದರು. ಈಗ 91ರ ಇಳಿಪ್ರಾಯದಲ್ಲಿರುವ ಶ್ರೀಯುತರು ತಮ್ಮ 15ನೇ ಪ್ರಾಯದಲ್ಲಿಯೇ ಕುಡುಬಿಯರ ಧಾರ್ಮಿಕ ಪರಂಪರೆಯ ಆಚರಣೆಯ ಮಹತ್ವವುಳ್ಳ ಪ್ರದರ್ಶನಾತ್ಮಕ ಜಾನಪದ ಕಲೆ -ಗುಮಟೆ ಕೋಲಾಟಗಳ ಹಾಡುಗಾರಿಕೆ ಹಾಗೂ ತತ್ಸಂಬಂಧ ನೃತ್ಯಗಾರಿಕೆಯನ್ನು ತಮ್ಮದಾಗಿಸಿಕೊಂಡ ಮೇರು ಕಲಾವಿದ. ಕೌಮಾರ್ಯ ಮತ್ತು ಯೌವನಾವಸ್ಥೆಯಲ್ಲಿ ಬಡತನದ ಬೇಗೆಯಲ್ಲಿ ಬೆಂದರೂ ಕಲೆಗಾಗಿ ತಮ್ಮ ಜೀವಮಾನವನ್ನು ಅರ್ಪಿಸಿದವರು. ಪೂರ್ತಿ ಅನಕ್ಷರಸ್ಥರಾಗಿರುವ ಇವರು, ತಮ್ಮ ಹಿರಿಯರಾರೂ ಕಲಾವಿದರಲ್ಲದಿದ್ದರೂ ಕೇವಲ ಕಂಠಸ್ಥ ಸಂಪ್ರದಾಯದಿಂದ ಪೂರ್ವ ಪರಂಪರೆಯಂತೆ ಸಂಪ್ರದಾಯಬದ್ಧ ಶೈಲಿಯನ್ನು ಕರಗತ ಮಾಡಿಕೊಂಡು ಈ ಕಲೆಗೆ ಅನರ್ಘ್ಯ ಮೌಲ್ಯವನ್ನು ತಂದುಕೊಟ್ಟ ಸವ್ಯಸಾಚಿ ಕಲಾವಿದ.

ಜಾನಪದ ಕಲೆಯಾದರೂ ಒಂದು ಪೂರ್ಣ ಶಿಸ್ತಿನ ಚೌಕಟ್ಟಿಗೆ ಒಳಪಟ್ಟಿರುತ್ತದೆ. ಕಲಾಭ್ಯಾಸ ಮತ್ತು ಪೋಷಣೆ, ಕಲೆಯ ಗೌರವಕ್ಕೆ ಚ್ಯುತಿ ತರುವಂತಿರಬಾರದು. ಕಲಾ ಪ್ರಕಾರಗಳು ಎಲ್ಲರಿಗೆ ಅನಾಯಾಸವಾಗಿ ಒಲಿಯುವುದು ಅಪರೂಪ. ಕೆಲವರಿಗೆ ಅದು ಹಿರಿಯರ ಬಳುವಳಿಯಾದ್ರೆ ಸೇಸು ಮೇಸ್ತ್ರಿಯವರಿಗೆ ಅದು ಸ್ವಯಾರ್ಜಿತ. ಇವರು ಗುಮಟೆ ಕಲೆಯನ್ನು ಕಲಿಯುವಾಗ ಪರಿಸರದಲ್ಲಿನ ಆ ಕಾಲದ ಪ್ರಸಿದ್ಧ ಕಲಾವಿದರಾದ ಕಾನ್ಸೆಕಾರ್ ಸೇಸಪ್ಪಗೌಡ, ಸೇಸಪ್ಪಗೌಡರ ಚಿಕ್ಕಪ್ಪ ರವಳುಗೌಡ, ವಿಠಲ ಮಾಸ್ತರರ ತಂದೆ ಅಮ್ಮುಗೌಡ, ಕುಪ್ಪು ಗುರಿಕಾರ, ಪುಟ್ಟಣ್ಣ ಗುರಿಕಾರ, ಬಾಬು ಗುರಿಕಾರ, ಪೆರಾರ್‌ಗಾರ್ ಕೊರಗಗೌಡ, ತಿಮ್ಮಪ್ಪ ಗೌಡ, ಸರಂಗಿಕಾರ್ ತಿಮ್ಮಗೌಡ -ಮುಂತಾದವರ ಪ್ರಭಾವ ತಮ್ಮ ಮೇಲೆ ಆಗಿರುವುದನ್ನು ಪ್ರಾಮಾಣಿಕವಾಗಿ ಸ್ಮರಿಸುತ್ತಾರೆ. ಅವರು ಕೃಷಿಕರಲ್ಲ. ಆದರೆ ಕುಡುಬಿ ಜಾನಪದ ಕಲಾಕ್ಷೇತ್ರದಲ್ಲಿ ಅವರು ಮಾಡಿದ ಕೃಷಿಗೆ ಬೆಲೆಕಟ್ಟಲು ಸಾಧ್ಯವಿಲ್ಲ. ಕೊಂಪದವಿನಲ್ಲಿ, ಒಂದು ಕಾಲದಲ್ಲಿ ನಿಂತೇ ಹೋಯಿತು ಎಂಬಂತಿದ್ದ ಗುಮಟೆ ಕಲೆಯ ಖೇಳ್ ಮೇಳವನ್ನು ಪುನಃಶ್ಚೇತನಗೊಳಿಸಿದವರು ಸೇಸು ಮೇಸ್ತ್ರಿಯವರು ಎಂಬ ಹೇಳಿಕೆ ಇದೆ.

ಯಾವಾಗಲೂ ಹರಿವ ನೀರಿನಂತಿರಬೇಕು ಹೊರತು ನಿಂತ ಮಡುವಾಗಬಾರದು. ನಿಂತನೀರು ವಾಗಿರುತ್ತದೆ. ಹರಿವ ನೀರು ಚೈತನ್ಯಯುತವಾಗಿರುತ್ತದೆ. ಸೇಸು ಮೇಸ್ತ್ರಿಯವರು ಸಾಂಪ್ರದಾಯಿಕ ಯನ್ನು ಮೀರದೆ, ಸಮರ್ಥ ನಿರ್ದೇಶನದಿಂದ, ಅರ್ಪಣಾ ಮನೋಭಾವದಿಂದ ಪರಿಸರದ ಎಲ್ಲರಿಗೆ ಯನ್ನು ಕಲಿಸಿಕೊಟ್ಟು ಎಲ್ಲರ ಅಭಿಮಾನಕ್ಕೆ ಪಾತ್ರರಾದ ಪುಣ್ಯಜೀವಿ. 6 ಗಂಡು 4 ಹೆಣ್ಣು ಸುಸಂಸ್ಕೃತ ತುಂಬು ಸಂಸಾರ ಇವರದು. ಇವರ ಗಂಡು ಮಕ್ಕಳೆಲ್ಲಾ ಕಲಾವಿದರು. ಹಿರಿಮಗ ಮೇಸ್ತ್ರಿಯವರು ಇವರ ಪರಂಪರೆಯನ್ನು ಮುಂದುವರಿಸುತ್ತಿದ್ದಾರೆ.

ಯನ್ನು ಪೋಷಿಸಿಕೊಂಡು, ಸಾರ್ಥಕತೆ ಪಡೆದವರು ವಿರಳ. ಸಾರ್ಥಕತೆ ಪಡೆದರೂ ಪ್ರಸಿದ್ಧಿಗೆ ರು ಅಪರೂಪ. ಹೆಚ್ಚಿನ ಕಲಾವಿದರು ಸಾರ್ಥಕತೆಯ ಒಂದು ಮಜಲು ತಲುಪಿದಂತೆ ಸಾಂದ್ರರಾಗಿ ತ್ತಾರೆ. ಸೇಸು ಮೇಸ್ತ್ರಿಯವರಿಗೆ ಈಗ 91ರ ಇಳಿವಯಸ್ಸಾದರೂ ಗಮಟೆ ಕಲೆಯಲ್ಲಿ ವಾಗಿರುತ್ತಾ ಯುವಕರಿಗೂ ಮೀರಿದ ಉತ್ಸಾಹದಿಂದ ತಮ್ಮನ್ನು ತೊಡಗಿಸಿಕೊಂಡಿರುವುದು ವಿಶೇಷ ಸ್ವಭಾವ, ನಿರಾಡಂಬರ ವ್ಯಕ್ತಿತ್ವ, ನಿಗರ್ವಿ, ಎಂದೂ ಪ್ರಚಾರ ಪ್ರಶಂಸೆ ಬಯಸದ ವಯೋವೃದ್ಧ ಮೇಸ್ತ್ರಿಯವರನ್ನು ಅವರ ಯೋಗ್ಯತೆಗೆ, ಸಮಾಜವು ಎರಡುಬಾರಿ ಗೌರವದ ವೇದಿಕೆಗಳಲ್ಲಿ ಸಿದೆ.



# ಅನುಬಂಧ - 2



ಕೊರ್ಗ್ಯಗೌಡ, ಕನ್ನೋರಿ

ಮಂಗಳೂರು ತಾಲೂಕು ಎಡಪದವು ಗ್ರಾಮದಲ್ಲಿ ವಾಸ್ತವ್ಯವಿರುವ ಹೆಚ್ಚಿನ ಕುಡುಬಿಯರು 'ಕನ್ನೋರಿ' ವಾಡೆಗೆ ಸಂಬಂಧಪಟ್ಟವರು. ಬಹಳ ಹಿಂದಿನಿಂದಲೂ ಜೈನ ಜಮೀನುದಾರರ ಒಕ್ಕಲುಗಳಾಗಿ ಕೃಷಿ ಮತ್ತು ಕೃಷಿ ಕೂಲಿಗಳಾಗಿ ಶ್ರಮಜೀವನದಲ್ಲಿ ತೊಡಗಿಸಿಕೊಂಡು ಇತರ ಸಮಾಜದವರಿಂದ ಪ್ರಾಮಾಣಿಕ ಕಷ್ಟಜೀವಿ ವರ್ಗ ಎಂಬುದಾಗಿ ಪ್ರಶಂಸೆಗೆ ಪಾತ್ರರಾದವರು. ಕನ್ನೋರಿ ವಾಡೆಯಲ್ಲಿ ಗುರಿಕಾರ ಮನೆತನವು ಕುಡುಬಿಯರ ಧಾರ್ಮಿಕ ಹಿನ್ನೆಲೆಯ, ಜಾನಪದ ಸೊಗಡಿನ ಸಾಂಸ್ಕೃತಿಕ ಕಲೆ - ಗುಮಟೆ ಕೋಲಾಟಗಳ ಗಾಯನ, ವಾದನ, ನರ್ತನಗಳಿಗೆ ಪ್ರಖ್ಯಾತ ಹೆಸರು. ಇಂತಹ ಗೌರವಾನ್ವಿತ ಮನೆತನದಲ್ಲಿ ಗುರಿಕಾರ ಅಪ್ಪು ಗೌಡರ ತೃತೀಯ ಪುತ್ರರಾಗಿ ಜನಿಸಿದವರು ಕೊರ್ಗ್ಯ ಗೌಡರು.

ಬಾಲ್ಯದಲ್ಲಿ ಇವರಿಗೆ ಒದಗಿದ ಪೂರಕ ಕಲಾ ಪರಿಸರ, ಚಿಕ್ಕ ಪ್ರಾಯದಲ್ಲೇ ಕುಡುಬಿ ಸಂಸ್ಕೃತಿಯ ಜಾನಪದ ಕಲೆಯಲ್ಲಿ ನಿಷ್ಣಾತರಾಗಲು ಅನುಕೂಲವಾಯಿತು. ಪರಂಪರಾಗತ ಹಿರಿಯರ ಬಳುವಳಿ, ನಿರಂತರ ಪರಿಶ್ರಮದ ಅಭ್ಯಾಸಗಳಿಂದಾಗಿ ಒಬ್ಬ ಉತ್ಕೃಷ್ಟ ಕಲಾವಿದರಾಗಲು ಸಾಧ್ಯವಾಯಿತು.

ಗುರಿಕಾರ ಅಪ್ಪುಗೌಡರು ಈ ಕಲೆಯ ಒಳಹೊರಗು, ಆಳ ಅಗಲಗಳನ್ನೆಲ್ಲಾ ಅರಿತವರಾಗಿದ್ದು ಹಾಡುಗಾರಿಕೆ, ಮತ್ತು ನೃತ್ಯಗಳನ್ನು ಸರಳ ರೀತಿಯಿಂದ ಕಲಿಸಲು ಸಮರ್ಥರಿದ್ದರು. ಆ ಕಾಲದಲ್ಲಿ ಹಾಡುಗಳನ್ನು ಬರೆದಿಡುವಷ್ಟು ವಿದ್ಯಾವಂತರು ಇರಲಿಲ್ಲ. ಜಾನಪದ ಹಾಡುಗಳು ಶ್ರುತಿ ಸಂಪ್ರದಾಯದಿಂದ, ಕೇವಲ ನೆನಪುಶಕ್ತಿಯಿಂದ ಬಾಯಿಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಹರಿದು ಬರುವಂಥವು. ಕೊರ್ಗ್ಯ ಗೌಡರಿಗೆ ಸ್ವಲ್ಪ ಮಟ್ಟಿನ ವಿದ್ಯಾಭ್ಯಾಸವೂ ಇದ್ದುದರಿಂದ ಅವರ ಪರಿಣತಿಗೆ ಸಹಕಾರಿಯಾಯಿತು ಎನ್ನಬಹುದು. ಪೂರ್ತಿ ರಾಮಾಯಣದ ಕಥನ ಗೀತಗಳನ್ನು ಪುಂಖಾನುಪುಂಖವಾಗಿ ಹಾಡುತ್ತಾ ಇತರ ಪುರಾಣಗಳ ಹಾಡುಗಳನ್ನೂ ಕಂಠಪಾಠ ಮಾಡಿಕೊಂಡು ನೃತ್ಯಾಭ್ಯಾಸದೊಂದಿಗೆ ಉತ್ತಮ ಕಲಾವಿದರಾಗಿ ರೂಪುಗೊಂಡು. ಇವರಿಗೆ ನೃತ್ಯಕ್ಕಿಂತಲೂ ಹಾಡುಗಾರಿಕೆ ಹೆಚ್ಚು ಒಲಿಯಿತು ಎನ್ನಬಹುದು. ಹೀಗೆ ಪರಂಪರೆಯ ಹರಿಕಾರರಾಗಿ ರೂಪುಗೊಳ್ಳುತ್ತಿರುವಾಗ ತಮ್ಮ ತಂದೆ ಮಾತ್ರವಲ್ಲದೆ ಆಗಿನ ಪ್ರಸಿದ್ಧ ಕಲಾವಿದರಾದ ಮಡಪಾಡಿ ತೋಟ ಮೋನುಗೌಡ, ಮದಪಾಡಿ ಅಣ್ಣಪ್ಪಗೌಡ, ಪಾದೆ ಅಣ್ಣುಗೌಡ, ದೆಪ್ಪದವು ಹೊನ್ನುಗೌಡ, ಕಿಟ್ಟುಗೌಡ, ಸಾಂತಪ್ಪ ಗೌಡ, ಗುತ್ತಗಾರ ಚಂದುಗೌಡ, ಪಟ್ಲಚಿಲ್ ಚಂದುಗೌಡ.. ಮುಂತಾದವರ ಒಡನಾಡಿತನವನ್ನು ಇವರು ಸ್ಮರಿಸುತ್ತಾರೆ.

ಕಲಾಪ್ರಜ್ಞೆ ಇರುವವರಿಗೆ ಅದನ್ನು ಹೇಗೆ ಉಳಿಸಬೇಕೆಂಬ ಅರಿವೂ ಇರುತ್ತದೆ. ಕಲೆ ಯಾವತ್ತೂ

ತ್ತರಕ್ಕೆ ಕಲಾವಿದರನ್ನು ಎಳೆದುಕೊಳ್ಳಬೇಕೇ ಹೊರತು ಕಲೆಯೇ ಕಲಾವಿದನ ಮಟ್ಟಕ್ಕೆ ಇಳಿದು ರದು. ಕೊರ್ಗ್ಯ ಗೌಡರು ಗುಮಟೆ ಕಲೆಯ ಹಾಡುಗಾರಿಕೆಯನ್ನು ಒಂದು ಉತ್ತಮಸ್ಥಾನಕ್ಕೆ ಸಿ ಕಲಾಮೌಲ್ಯಕ್ಕೆ ಓಜಸ್ಸು ತೇಜಸ್ಸನ್ನು ತಂದು ಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದವರು. ಂದ ಹಲವು ಯುವಕರು ಪ್ರಭಾವಿತರಾಗಿ ಪರಂಪರೆಯನ್ನು ಮುಂದುವರಿಸುತ್ತಿದ್ದಾರೆ. ಇವರ ಮಕ್ಕಳ ೂಸಗೌಡರು ಪದವೀಧರರಾಗಿ ಉದ್ಯೋಗಸ್ಥರಾಗಿದ್ದರೂ ತಮ್ಮ ತಂದೆಯ ಕಲಾಕ್ಷೇತ್ರವನ್ನು ುತ್ತಿದ್ದಾರೆ.

ಕೃತ ಗುಮಟೆ ಹಾಡುಗಳ ಸಾಹಿತ್ಯದ ಬಗ್ಗೆ ಸಂಪನ್ಮೂಲ ವ್ಯಕ್ತಿಯಾಗಬಲ್ಲವರಲ್ಲಿ ಗುರಿಕಾರ ಗೌಡರ ನಂತರದ ವ್ಯಕ್ತಿ ಕೊರ್ಗ್ಯಗೌಡರು. ಈಗ ಅವರ ಪ್ರಾಯ 75 ವರ್ಷ ದಾಟಿ ಯಂಚಿನಲ್ಲಿದ್ದರೂ ಕಲಾ ಸೇವೆಯಲ್ಲಿ ಪ್ರವೃತ್ತರು.



## ಅನುಬಂಧ - 3


ಬಾಬು ಗೌಡ, ಮೈಂದೇರಿ

ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧ ಯಾತ್ರಾಸ್ಥಳ ಮತ್ತು ಸಾಂಸ್ಕೃತಿಕ ನಗರ, ಜೈನಕಾಶಿಯೆಂದೇ ಪ್ರಖ್ಯಾತವಾದ ಊರು ಮೂಡಬಿದ್ರೆ. ಇಲ್ಲಿಂದ ಸುಮಾರು ಆರು ಕಿಮೀ ದಕ್ಷಿಣದಲ್ಲಿ, ಹಿಂದೆ ಚೌಟರಸರ ಆಳ್ವಿಕೆಗೊಳಪಟ್ಟ ಮರಕಡ ಗುತ್ತಿನ ಬಂಟ ಸಮುದಾಯದ ಆಡಳಿತವಿದ್ದ 'ಮೈಂದೇರಿ' ಎಂಬ ಪ್ರಶಾಂತ ಪರಿಸರದಲ್ಲಿ ಕುಡುಬಿಯರೇ ಹೆಚ್ಚು ವಾಸ್ತವ್ಯವಿರುವ ವಾಡೆಯಿದೆ. ಕುಡುಬಿಯರು ಮರಕಡ ಗುತ್ತಿನ ಒಕ್ಕಲಾಗಿ ತಮ್ಮ ಸ್ವಾಮಿನಿಷ್ಠೆ, ಪ್ರಾಮಾಣಿಕತೆ, ಸತ್ಯಸಂಧತೆ, ದೈವಭಕ್ತಿ, ಸ್ವಾಭಿಮಾನ, ಸರಳ ಜೀವನಗಳಿಂದ ಸುಸಂಸ್ಕೃತ ಸಮಾಜವಾಗಿ ಬಾಳಿ ಬದುಕಿದವರು. ಇಲ್ಲಿಯ ಗುರಿಕಾರ ಮನೆಯ ಪರಂಪರಾಗತ ಕಲಾವಿದ ದಿ| ತಿಮ್ಮ ಗೌಡರ ಪುತ್ರ ಸುಮಾರು 58 ವರ್ಷ ದಾಟಿದ ಎಲ್ಲರಿಗೂ 'ಬಾಬಣ್ಣ' ಅಂತಲೇ ಪರಿಚಿತರಾದ ಬಾಬುಗೌಡರು ಪ್ರಕೃತ ಕೊಡಿಯಾಲ್ ಕುಡುಬಿಯರ ಗುಮಟೆ ಕಲಾವಿದರಲ್ಲಿ ಪ್ರಸಿದ್ಧರು.

ಬಾಲ್ಯದಲ್ಲಿ ' ಹಾಸಲಿಕ್ಕುಂಟು, ಹೊದೆಯಲಿಕ್ಕಿಲ್ಲ' ಎಂಬ ನಾಣ್ಣುಡಿಯಂತೆ ಕಿತ್ತು ತಿನ್ನುವ ಬಡತನ, ಆರ್ಥಿಕ ಅಡಚಣೆ, ಪ್ರೋತ್ಸಾಹದ ಕೊರತೆಯಿಂದಾಗಿ 'ಹಲಗೆ ಬಳಪವ ಪಿಡಿದವರಲ್ಲ' ದುದರಿಂದ ವಿದ್ಯಾಭ್ಯಾಸ ಸೊನ್ನೆ. ಆದರೆ ಇವರ ಅಪಾರ ನೆನಪು ಶಕ್ತಿ, ಚುರುಕುಮತಿ, ಹಾಡಿದುದನ್ನು ಹಾಡಿದ ಹಾಗೇ ಮನಸ್ಸಿನಲ್ಲಿ ಅಚ್ಚೊತ್ತಿಕೊಂಡು, ಕುಣಿದುದನ್ನು ಕುಣಿದ ಹಾಗೇ ಅನುಕರಣೆ ಮಾಡಿ, ಮರುದಿನವೇ ತಾನೂ ಹಾಡಿ, ಕುಣಿದು ಕರತಲಾಮಲಕ ಮಾಡಿಕೊಳ್ಳುವ ಸಾಮರ್ಥ್ಯದಿಂದಾಗಿ ಅಭಿಜಾತ ಕಲಾವಿದನಾಗಿ ಈ ಕಲೆಗೆ ಉಜ್ವಲ ಭವಿಷ್ಯವನ್ನು ರೂಪಿಸಿಕೊಂಡರು. ಸೀಮಿತ ಅವಧಿಯಲ್ಲಿ ಮಾತ್ರವಲ್ಲದೆ ಇತರ ಸಂದರ್ಭಗಳಲ್ಲಿ ಈ ಕಲಾಗಾರಿಕೆಯ ಅಭ್ಯಾಸಕ್ಕೆ ಸಮಾಜದ ಧಾರ್ಮಿಕ ಕಟ್ಟುಪಾಡುಗಳ ನಿರ್ಬಂಧ ವಿದ್ದಾಗ್ಯೂ ಮಳೆಗಾಲದ ರಾತ್ರಿಗಳಲ್ಲಿ ತಂದೆಯಿಂದ ಮಗನಿಗೆ ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣಗಳ ಹಾಡುಗಳ ಕಂಠಪಾಠವಾಗಿ ನಿದ್ರೆಗೆ ಜಾರುವಾಗ ಕೆಲವು ಬಾರಿ ಮುಂಜಾವದ ಕೋಳಿ ಕೂಗುತ್ತಿತ್ತು. ತಮ್ಮ ಕುಟುಂಬದ ಆಗಿನ ಕಾಲದ ಪ್ರಸಿದ್ಧ ಕಲಾವಿದರಾಗಿದ್ದ ವೀರಪ್ಪ ಗುರಿಕಾರ, ಅಣ್ಣು ಗುರಿಕಾರ, ನೇಮು ಗೌಡ ಮುಂತಾದವರ ಹಾಡು ಕುಣಿತಗಳಿಂದ ಪ್ರಭಾವಿತನಾಗಿ ಬಾಬಣ್ಣಗೆ 18ರ ಯುವಪ್ರಾಯ ತುಂಬಿದಾಗ ಒಬ್ಬ ಪ್ರಬುದ್ಧ ಕಲಾವಿದನಾಗಲು ಸಾಧ್ಯವಾಯಿತು.

ಬಾಬುಗೌಡರೇ ಹೇಳುವ ಪ್ರಕಾರ - ಹಿರಿಯರಿಂದ ಈ ಕಲೆಯನ್ನು ಕಲಿಯಲು ತುಂಬಾ ಕಷ್ಟಪಡಬೇಕಾಗಿತ್ತು. ಹಾಡು, ನೃತ್ಯ ಮತ್ತು ವಾದನಗಳನ್ನು ಕೇಳಿ, ನೋಡಿ, ಅನುಭವಿಸಿ ಕಲಿತುಕೊಳ್ಳಬೇಕಾಗಿತ್ತು. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಧಾರ್ಮಿಕ ಆಚರಣೆಯ ಉಳಿವಿಗಾಗಿ ಈ ಕಲೆಯನ್ನು ಕಲಿಯಲೇಬೇಕಾದ ಅನಿವಾರ್ಯತೆ ಇತ್ತು. ಚಿಕ್ಕ ಹುಡುಗರು ಅನುಭವಿ ಹಿರಿಯರೊಂದಿಗೆ ಆಡಬೇಕಾದಲ್ಲಿ ತುಂಬಾ ಪರಿಣತಿ ಹೊಂದಿರಬೇಕಾಗಿತ್ತು. ಪರಿಣತಿ ಹೊಂದಿದ್ದರೂ ತಂಡದಲ್ಲಿ ಆಡುವಾಗ ಹಾಡು, ಹೆಜ್ಜೆಗಾರಿಕೆ ಮತ್ತು ಗುಮಟೆ ವಾದನದ ತಾಳಗಳು ಕಿಂಚಿತ್ ತಪ್ಪಿದರೂ ಕುಟುಂಬ ಸಂಬಂಧದ

ಜಿಲ್ಲದೆ, ಯಾವನೇ ಹಿರಿಯ ಕಲಾವಿದನ ಪೆಟ್ಟು, ಒದೆಯನ್ನಾದರೂ ತಿನ್ನಬೇಕಾಗಿತ್ತು. ಮಾತ್ರವಲ್ಲ, ುಷದಲ್ಲೇ ತಂಡದಿಂದ ಒದ್ದು ಹೊರಗೆ ಹಾಕುತ್ತಿದ್ದರು. ಹೀಗೆ ಒದೆ, ಪೆಟ್ಟು ತಿಂದರೂ ನಾಗಲೀ, ಹುಡುಗನ ಹೆತ್ತವರಾಗಲೀ, ಒದ್ದವರ ವಿರೋಧವಾಗಿ ಎದುರು ಮಾತಾಡುವಂತಿರಲಿಲ್ಲ. ೂ ಚಕಾರ ಶಬ್ದ ಸಹಿತ ಎತ್ತುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲಿ ಒದೆ ತಿಂದ ಹುಡುಗ ುರೊಂದಿಗೆ ಆಡಿಯೇ ತೀರುತ್ತೇನೆ' ಎಂಬ ಹಠದಿಂದ ಎಷ್ಟೇ ಕಷ್ಟ ಪಟ್ಟಾದರೂ ಒದೆ, ಪೆಟ್ಟು, ಾನಗಳನ್ನು ಸಹಿಸಿಯಾದರೂ ಈ ಕಲೆಯನ್ನು ಕಲಿಯುತ್ತಿದ್ದರು.

ಸಮಕಾಲೀನ ಸಂದರ್ಭದಲ್ಲಿ ಕುಡುಬಿ ಕಲಾವಿದರ ಪೈಕಿ ಗುಮಟೆ ವಾದನ, ಹಾಡುಗಾರಿಕೆ, ನೃತ್ಯ, ಾ ವಿಧಿಗಳ ಹಾಸುಹೊಕ್ಕು, ಆಳ ಅಗಲಗಳನ್ನು ನಿಯಮಾನುಸಾರವಾಗಿ ಬಲ್ಲ ಸವ್ಯಸಾಚಿ ದ ಬಾಬು ಗೌಡರು ತಮ್ಮ ಜೀವನಾನುಭವ ಮೌಲ್ಯಗಳಿಂದ ಕುಡುಬಿ ಸಂಸ್ಕೃತಿಯ ಬಗ್ಗೆ ಮೂಲ ವ್ಯಕ್ತಿಯಾಗಿ ಅಧಿಕಾರವಾಣಿಯಿಂದ ವಿವರಣೆ ನೀಡಬಲ್ಲರು. ಇವರ ಹಾಡಿನ ಶೈಲಿ, ದ ಮಟ್ಟು, ಗುಮಟೆ ವಾದನದ ಗತ್ತು ಹಿಂದಿನ ಹಿರಿಯರ ಶೈಲಿಯನ್ನು ನೆನಪು ಮಾಡಿಕೊಡುತ್ತದೆ. ಟೆ ಹೆಗಲಿಗೆ ಹಾಕಿಕೊಂಡು ಆಡಲು ಪ್ರಾರಂಭಿಸಿದರೆ, ಒಂದು ರೀತಿ ಆವೇಶ ಪಡೆದವರಂತೆ ು, ದಣಿವುಗಳ ಪರಿವೆಯಿಲ್ಲದೇ ಆಡುತ್ತಿರುತ್ತಾರೆ. ಮಿಕ್ಕವರು ದಣಿವಿಗಾಗಿ ವಿಶ್ರಮಿಸಿದರೂ ವಿರಾಮ ಪಡೆಯಲಿಕ್ಕಿಲ್ಲ. ಹುಲಿಯ ಘರ್ಜನೆಯಂತಹ ವಿಶಿಷ್ಟ ಕಂಠವಾದರೂ ಅದರ ತಿಯಿಂದ ಶ್ರುತಿ ತಪ್ಪದ ಗಾನ ಮಾಧುರ್ಯ, ಆಹ್ಲಾದಕರ ಆಲಾಪನೆ, ಸಮಯಾವಧಾನದ ಡೆಯ ಚಾತುರ್ಯಗಳಿಂದ, ಮಾತ್ರಾ ಸಂಖ್ಯೆಗಳ ಲೆಕ್ಕಾಚಾರಕ್ಕೆ ಚ್ಯುತಿ ಬರಲಿಕ್ಕಿಲ್ಲ. ಹೆಜ್ಜೆಗಾರಿಕೆ ಕ್ಕಿಲ್ಲ. ಕೋಲಾಟವಾಡುವಾಗ ಎಲ್ಲಿ ಕಣ್ಣು ಕಿವಿ, ಕೈಮೈಗೆ ತಾಗಿ ಪೆಟ್ಟಾಗಬಹುದೊ ಎಂಬ ಭಯ ಗಾರರಿಗೆ ಆಗಬಹುದಾದರೂ, ಕೋಲುಗಳ ಪೆಟ್ಟು ಬೀಳುವಷ್ಟೇ ಬಿದ್ದೀತು. ತಾಗುವಷ್ಟೇ ತಾಗಿ ಮಾತ್ರ ಹೊರಹೊಮ್ಮಿತು. ಜಿಗಿಯುವಿಕೆ - ಜಿಗಿದಷ್ಟೇ ನಾಜೂಕಿನಲ್ಲಿ ಕಾಲೂರೀತು. ಇವರು ಟೆ ಹಿಡಿದು ವಾದನ ಮಾಡುತ್ತಿರುವಂತೆಯೇ ಗಿರ್ರನೆ ತಿರುಗುವ ರೀತಿ, ತಿರುಗುವ ಸುತ್ತುಗಳ , ತಾಳ ತಪ್ಪದ ಬಡಿತ, ಹಾಡಿನ ಏರಿಳಿತದ ಹಿಡಿತ-ಗಳ ಕಲಾ ಕೌಶಲ್ಯ ಅವರದ್ದೇ ಶಲ್ಲಿ ದಾಖಲೆಯಾಗಿ ಉಳಿದಿದೆ. ಪ್ರಾಯ 58 ದಾಟಿದರೂ ಇವರಲ್ಲಿ ತರಬೇತಿ ಪಡೆದ ಯುವಕರು ಅರ್ಧದಷ್ಟು ಆಡಲಾರರು ಎಂದರೆ ಅತಿಶಯವಾಗಲಿಕ್ಕಿಲ್ಲ.

ಬಾಬುಗೌಡರ ವ್ಯಕ್ತಿತ್ವ, ಕಲಾಗಾರಿಕೆಯ ಆಕರ್ಷಣೆ, ಪ್ರೇರಣೆ, ಪೋಷಣೆ, ಪ್ರೋತ್ಸಾಹಗಳಿಂದ ವಿತರಾದವರಲ್ಲಿ ನಾನೂ ಒಬ್ಬ. ಇವರ ಕಲಾಗಾರಿಕೆಯನ್ನು ಅನೇಕರು ಅನುಕರಿಸಿದ್ದಾರಾದರೂ ೇರಿ ವಾಡೆಯ ಇವರ ಜೊತೆಗಾರ ಫಕೀರ ಗೌಡರು ಹೊರತು ಪಡಿಸಿದರೆ ಉಳಿದವರ್ಯಾರೂ ೆ ಸರಿಯಾದ ಜೋಡಿಯಾಗಿಲ್ಲ. ಬಾಬು ಗೌಡರ ಪ್ರತಿಭೆಯನ್ನು ಸಮಾಜ ಗುರುತಿಸುವಂತಾಗಬೇಕು. ಕ ಆಚರಣಾ ಹಿನ್ನೆಲೆಯ ಈ ಕಲಾಗಾರಿಕೆಯಿಂದ ಹೊಟ್ಟೆ ತುಂಬುವುದಿಲ್ಲವಾದರೂ ದೈವೀ ನೆಯ ನಂಬಿಕೆಯಿಂದ ಮನೋನೆಮ್ಮದಿಯನ್ನು ಹೊಂದಿ, ಮುಂದಿನ ಜೀವನಕ್ಕೆ ಹುರುಪು ಹಗಳನ್ನು ತುಂಬುವ ಈ ಕಲೆ ಬಾಳಬೇಕು.

•



## ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಮಂಗಳೂರು
## ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯ ಪ್ರಕಟಣೆಗಳು

| ಪುಸ್ತಕದ ಹೆಸರು | | ಲೇಖಕರು | ಬೆಲೆ | ಪ್ರಕಟಿತ |
|---|---|---|---|---|
| 1. | ಕವಿತಾಮೃತ್ | ಅಕಾಡೆಮಿ ಪ್ರಕಾಶನ | 20.00 | 1999 |
| 2. | ಕೊಂಕಣಿ ಮಹಾ ಮಾನೆಸ್ತ್ ಲೇಖನ ಮಾಲೆ | | | |
| 1. | ಲುವಿಸ್ ಮಸ್ಕರೇನ್ಹಸ್ | ಗ್ಲೆಡಿಸ್ ರೇಗೋ | 10.00 | 2000 |
| 2. | ಕಾರ್ನಾಡ್ ಸದಾಶಿವ ರಾವ್ | ವಿಶ್ವ ಕುಂದಾಪುರ | 10.00 | 2000 |
| 3. | ಎ.ಟಿ. ಲೋಬೊ | ಗ್ಲೆಡಿಸ್ ರೇಗೋ | 10.00 | 2000 |
| 4. | ಪಂಜೆ ಮಂಗೇಶ ರಾವ್ | ಸಿದ್ದಾಪುರ ವಾಸುದೇವ ಭಟ್ | 10.00 | 2000 |
| 5. | ಉಳ್ಳಾಲ ಶ್ರೀನಿವಾಸ್ ಮಲ್ಯ (ಲಭ್ಯವಿಲ್ಲ) | ಬಸ್ತಿ ವಾಮನ್ ಶೆಣೈ | 10.00 | 2000 |
| 6. | ಅಮ್ಮೆಂಬಳ್ ಸುಬ್ಬರಾವ್ ಪೈ (ಲಭ್ಯವಿಲ್ಲ) | ಸಂಧ್ಯಾ ಶೆವಗೂರ್ | 10.00 | 2000 |
| 7. | ಬಾ. ಫ್ರಾ. ದ. ಕೋಸ್ತ (ಲಭ್ಯವಿಲ್ಲ) | ವಿಕ್ಟರ್ ಡಿ'ಸಿಲ್ವಾ | 10.00 | 2000 |
| 8. | ಮಂಜೇಶ್ವರ ಗೋವಿಂದ ಪೈ (ಲಭ್ಯವಿಲ್ಲ) | ನಾಗರಾಜ ಜವಳಿ | 10.00 | 2000 |
| 9. | ಪಂಡಿತ ತಾರಾನಾಥ | ಸಂಧ್ಯಾ ಶೆವಗೂರ್ | 10.00 | 2000 |
| 10. | ದಿನಕರ ದೇಸಾಯಿ | ವಾಸುದೇವ ಶ್ಯಾನುಭಾಗ್ | 10.00 | 2000 |
| 11. | ಎಸ್. ಎನ್. ಕಾಮತ್ | ಲೀಲಾ ಭಟ್ | 10.00 | 2000 |
| 12. | ಹಿರಿಯಡ್ಕ ರಾಮರಾಯ ಮಲ್ಯ | ಇಂದಿರಾ ನಾಯಕ್ | 10.00 | 2000 |
| 13. | ಕರ್ನಾಟಕ ಗಾಂಧಿ ತಿಮ್ಮಪ್ಪ ನಾಯಕ್ | ವಿಶ್ವ ಕುಂದಾಪುರ | 10.00 | 2001 |
| 14. | ಡಾ. ಟಿ. ಎಮ್. ಎ. ಪೈ | ಸಿದ್ದಾಪುರ ವಾಸುದೇವ ಭಟ್ | 10.00 | 2001 |
| 15. | ರೆಂಜಾಳ ಗೋಪಾಲ ಶೆಣೈ | ಅನಿತಾ ಜಿ. ಶೆಣೈ | 10.00 | 2001 |
| 16. | ಬಿಡಾರಾಂ ಕೃಷ್ಣಪ್ಪ | ಶಾಂತಾರಾಂ ಬಾಳಿಗಾ | 10.00 | 2001 |
| 17. | ಮೊನ್ಸಿಜೊರ್ ಸಿಲ್ವೆಸ್ಟರ್ ಫ್ರಾನ್ಸಿಸ್ ಮಿನೇಜ್ | ಶ್ರೀ ಲಿಯೋ ಸೋಜ್ | 10.00 | 2003 |
| 18. | ಕುಡ್ಪಿ ಶ್ರೀನಿವಾಸ್ ಶೆಣೈ | ಜಯಶ್ರೀ ಬಾಳಿಗಾ | 10.00 | 2003 |
| 3. | ಇತರ ಪುಸ್ತಕಗಳು | | | |
| 1. | ಗೊಂಯ್ ಸೊಡುನ್ ಆಯ್ಲಿ ಮಾಂಯ್ | ಜೋಕಿಂ ಪಿಂಟೊ | 30.00 | 2003 |
| 2. | ಕೊಂಕಣ್ಯಾಲಿ ಕಾವಿ ಕಲಾ | ಕೃಷ್ಣಾನಂತ ಕಾಮತ್ | 100.00 | 2000 |
| 3. | ಕುಡ್ಮ್ಯಾಲಿ ಗುಮ್ಟಾಂ ಆನಿ ತೋಣಿಯಾ ಪದು | ಗೋಪಾಲ ಗೌಡ | 40.00 | 2001 |
| 4. | ಬಾಕಿಬಾಬ ಬೊರಕಾರ್ | ಪ್ರಕಾಶ ಥಳಿ (ಲಿಪ್ಯಾಂತರ) | 60.00 | 2001 |
| 5. | ಫಾ| ಸಿ.ಸಿ.ಎ. ಪೈ (ಸ್ವಾಮಿ ಸುಪ್ರಿಯಾ) | ವಿಲಿಯಂ ಮಾಡ್ತಾ | 20.00 | 2001 |
| 6. | ಕೊಂಕಣೊ ಕಳೊ (ಪ್ರೂರ್ವ ಪ್ರಾಥಮಿಕ್ ಭಾಷಾ ವಿಕಾಸ್ ಸಾಹಿತ್ಯ) | ಅಕಾಡೆಮಿ ಪ್ರಕಾಶನ | 100.00 | 2001 |

| | | | |
|---|---|---|---|
| ಕೊಂಕಣಿ ಸಮಾಂತರ ಶಬ್ದ ಕೋಶ್ | ಅಕಾಡೆಮಿ ಪ್ರಕಾಶನ | 500.00 | 2001 |
| ಅಮ್ಗೆಲೊ ಕಾರುತು | ಹೆಚ್. ರಾಘವೇಂದ್ರ ರಾವ್ | 20.00 | 2002 |
| ಕೊಂಕ್ಣಿ ಗ್ರಂಥಾ ಸೂಚಿ | ಅಕಾಡೆಮಿ ಪ್ರಕಾಶನ | 50.00 | 2004 |
| ಇಂಗ್ಲಿಷ್ -ಕೊಂಕಣಿ ಶಬ್ದ ಕೋಶ್ | ಸ್ಟೀವನ್ ಕ್ವಾಡ್ರಸ್ | 250.00 | 2007 |
| ಹಾಸುನ್ ನಾಚುನ್ ಗಾವ್ಯಾ ಯಾ ಸಿ.ಡಿ. | ಅಕಾಡೆಮಿ ಪ್ರಕಾಶನ | 100.00 | 2006 |
| ಧ್ವನಿ ಸುರುಳಿ | ಅಕಾಡೆಮಿ ಪ್ರಕಾಶನ | 35.00 | 2006 |
| ಯೆಯಾ ಕೊಂಕ್ಣಿ ಶಿಕುಯಾಂ | ಸ್ಟೀವನ್ ಕ್ವಾಡ್ರಸ್ | 14.00 | 2006 |
| ಸಿದ್ದಿ ಲೋಕ್ ಗೀತ್ ಸಂಗ್ರಹ್ | ಫ್ರಾನ್ಸಿಸ್ ಹಾರ್ನೊಡಕರ್ | 50.00 | 2007 |
| ಖಾರ್ವಿ ಲೋಕ್ ಗೀತ್ ಸಂಗ್ರಹ್ | ಸುರೇಶ್ ತಾಂಡೇಲ (ಅ.ಪ್ರ) | 50.00 | 2007 |
| 20 ವ್ಯಾ ಶಿಕ್ಡ್ಯಾಚ್ಯೊ ಕೊಂಕ್ಣಿ ಕವಿತಾ | ಮೆಲ್ವಿನ್ ರೊಡ್ರಿಗಸ್ (ಅ.ಪ್ರ) | 100.00 | 2007 |
| ಘಾಯ್ಯಾನ್ ಆಯ್ಲೊ ವ್ಹೊರ್ | ಐರಿನ್ ರಿಬೆಲ್ಲೊ (ಅ.ಪ್ರ.) | 30.00 | 2007 |
| ಕುಡ್ಬಿ ಜಾನಪದ ಸಂಗ್ರಹ | ಡಿ.ವಿ. ಪ್ರಕಾಶ್ ಪ್ರೊ. ಎ.ವಿ.ನಾವಡ | 50.00 | 2008 |
| ಕನ್ನಡ ಲಿಪಿಯೆಂತ್ ಕೊಂಕ್ಣಿ ಬರೊಂವ್ಚಿ ಪ್ರಮಾಣ್ ರೀತಿ | ಫಾ| ಪ್ರತಾಪ್ ನಾಯಕ್ | 30.00 | 2008 |
| ಆರ್.ಎಸ್.ಬಿ. ಸಾಹಿತ್ಯ ಸಂಗ್ರಹ್ | ಪುಂಡಲೀಕ ಮರಾಠೆ | 20.00 | 2008 |

## ದಶಮಾನೋತ್ಸವ ಸಂದರ್ಭದಲ್ಲಿ ಪ್ರಕಟವಾದ ಪುಸ್ತಕಗಳು

| | | | |
|---|---|---|---|
| ಕೊಂಕ್ಣಿ ಕಾವ್ಯಾಂ | ಹೆಚ್ ರಾಘವೇಂದ್ರ ರಾವ್ ಮತ್ತು ಸ್ಟೀವನ್ ಕ್ವಾಡ್ರಸ್ | 20.00 | 2004 |
| ಕೊಂಕ್ಣಿಂತ್ಲೊ ಮಟ್ವೊ ಕಥಾ | ಡೋಲ್ಫಿ ಕಾಸ್ಸಿಯಾ | 20.00 | 2004 |
| ಕೊಂಕ್ಣಿಂತ್ ಆಸ್ಕಾರ್ ಸಾಹಿತ್ | ಫ್ರಾನ್ಸಿಸ್ ಡಿ ಕುನ್ಹಾ | 20.00 | 2004 |
| ಕೊಂಕ್ಣಿಂತ್ ಲ್ಹಾನ್ಹಾಂ ಭುಗ್ಯಾಂಚೆಂ ಸಾಹಿತ್ | ಪ್ರವೀಣ್ - ಫೆರ್ನಾಂಡಿಸ್ | 20.00 | 2004 |
| ಕೊಂಕಣಿ ರಂಗಭೂಮಿ | ವಾಸುದೇವ ಶ್ಯಾನುಭಾಗ್ | 20.00 | 2004 |
| ಕರ್ನಾಟಕಾಂತ್ ಕೊಂಕ್ಣಿ ಸಂಗೀತ್ ಆನಿ ತಾಂತ್ಲೆ ಪ್ರಕಾರ್ | ಎಲ್ ಎನ್ ರೇಗೊ | 20.00 | 2004 |
| ಕೊಂಕ್ಣಿ ನೆಮಾಳಿಂ | ಗ್ಲೆಡಿಸ್ ರೇಗೊ | 20.00 | 2004 |

## ಸುವರ್ಣ ಕರ್ನಾಟಕ ಯೋಜನೆಯಲ್ಲಿ ಪ್ರಕಟಿಸಿದ ಪುಸ್ತಕಗಳು

| | | | |
|---|---|---|---|
| ದಿಸಕರಾಲಿ ಕವನಾಂ | ಕೂಡ್ಲ ಆನಂದ ಶ್ಯಾನುಭಾಗ್ | 50.00 | 2007 |
| 20 ವ್ಯಾ ಶೆಕ್ಡ್ಯಾಚೆ ಕೊಂಕ್ಣಿ ಮ್ಹಾನ್ ಮನಿಸ್ (ಭಾಗ-1) | ಅಕಾಡೆಮಿ ಪ್ರಕಾಶನ | 200.00 | 2007 |
| ಸುವರ್ಣಕರ್ನಾಟಕಾಂತ್ ಕೊಂಕ್ಣಿ ಲೋಕ್ | ಫಾ| ರಿಚಡ ರೇಗೊ ಜೆ.ಸ | 200.00 | 2007 |
| 20 ವ್ಯಾ ಶೆತ್ಡ್ಯಾಚ್ಯೊ ಕೊಂಕ್ಣಿ ಕಾಣಿಯೊ | ವಲ್ಲಿ ಕ್ವಾಡ್ರಸ್ | 200.00 | 2007 |

| | | | |
|---|---|---|---|
| ಸಾಶ್ಶಿಲೊ ಉಗ್ಡಾಸ್ | ವಿಕ್ಟರ್ ಡಿ ಸಿಲ್ವಾ | 50.00 | 2008 |
| ತಿರ್ಸ್ಯಾ ಮೊರ್ನಾ ಉಪ್ರಂತ್ | ಫಾ ಪ್ರತಾಪ್ ನಾಯ್ಕ್ | 50.00 | 2008 |
| ಮಹಾಕವಿ ಗೋವಿಂದ ಪೈ | ಸುವರ್ಣ ಗಾಡ | 50.00 | 2008 |
| ಮಾಧ್ಯಮದಲ್ಲಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | ವಿನ್ಸೆಂಟ್ ಆಳ್ವ | ಉಚಿತ | 2008 |
| ಸಂಸ್ಕಾರ್ | ವಿನ್ಸೆಂಟ್ ಆಳ್ವ | 50.00 | 2008 |
| ವೆಲ್‌ಕಮ್ ಟು ಕೊಂಕಣಿ | ಸ್ಟೀವನ್ ಕ್ವಾಡ್ರಸ್ | 250.00 | 2008 |
| ಶಾಳಾಂನಿ ಕೊಂಕ್ಣಿ ಏಕ್ ಜಯ್ತಿವಂತ್ ಸಾಹಸ್ ಸುವರ್ಣ ಕರ್ನಾಟಕಾಂತ್ ಕೊಂಕ್ಣಿ | ಸ್ಟೀವನ್ ಕ್ವಾಡ್ರಸ್ / ವಿತೊರಿ ಕಾರ್ಕಳ್ | 30.00 | 2008 |
| ಲೋಕ್ - ವಿ.ಸಿ.ಡಿ. | ಫಾ ರಿಚರ್ಡ್ ರೇಗೋ | 30.00 | 2008 |

| ಪುಸ್ತಕಮುದ್ರಣದಅವಧಿ | | ಪ್ರಥಮಮುದ್ರಣ ಪುಸ್ತಕ ಮುದ್ರಣದಅವಧಿ | ಸಾರ್ವಜನಿಕರಿಗೆ ರಿಯಾಯಿತಿ | ಪುಸ್ತಕಮಾರಾಟಗಾರರಿಗೆ ರಿಯಾಯಿತಿ |
|---|---|---|---|---|
| 1. | 10 ವರ್ಷದ ಮೇಲ್ಪಟ್ಟ ಅವಧಿಯ ಪುಸ್ತಕಗಳು | 1999 | 50% | 55% |
| 2. | 6 ವರ್ಷದಿಂದ 10 ವರ್ಷದ ಅವಧಿಯ | 2000-2004 | 30% | 35% |
| 3. | 3ರಿಂದ 5 ವರ್ಷಗಳ ಅವಧಿಯ ಪುಸ್ತಗಳು | 2005-2007 | 20% | 25% |
| 4. | ಹೊಸ ಪ್ರಕಟಣೆಗಳು 2 ವರ್ಷದ ಅವಧಿಯ ವರೆಗೆ | 2008-2010 | 15% | 20% |



## ಶ್ರೀ ಯಂ ಗೋಪಾಲ ಗೌಡ

ಮಂಗ್ಳುರ್ ತಾಲೂಕ್ ಎಡಪದವು ಗ್ರಾಮಾಚ್ಯಾ ಪಟ್ಲಚಿಲ್ ಮ್ಹಳ್ಳೆಕಡೆ ಏಕ್ ಸಾಂಪ್ರದಾಯಿಕ್ ಕುಡ್ಮಿ ಕುಟ್ಮಾಂತ್ 27.11.1955 ವೆರ್ ಜಲ್ಮಾಲೊ ಹಾಚೆಂ ವಿದ್ಯಾಭ್ಯಾಸ್ ಪಿಯುಸಿ. ಪ್ರಕೃತ್ ಮಂಗ್ಳುರ್ಚ್ಯಾ ಸೈಂಟ್ ಎಲೋಶಿಯಸ್ ಕೊಲೆಜಿಚ್ಯಾ ಕೊಂಕಣಿ ಸಂಸ್ಥ್ಯಾಂತ್ ವೃತ್ತಿ.

ಪ್ರವೃತ್ತೆನ್ ಕುಡ್ಮಿ ಸಂಸ್ಕೃತಿಚ್ಯಾ ಜಾನಪದಾಚೊ ಅಭಿಜಾತ್ ಕಲಾಕಾರ್ ಜಾವ್ನ್ ಗುಮ್ಟಾಂ ಆನಿ ತೊಣಿಯಾಂ ನಾಚಾಕ್ ಪ್ರಸಿದ್ಧ್. 37 ವರ್ಸಾದ್ದಿಂ ಕುಡ್ಮಿ ವಾಡ್ಯಾಂ ಭಾಯ್ರ್ ಕಲಾಪ್ರದರ್ಶನಾಕ್ ಹಾಂಣಿಂ ರಚ್‍ಲ್ಲೊ ಪಂಗಡ್ ಆತಾಂ 'ಕುಡುಬಿ ಜಾನಪದ ಕಲಾ ವೇದಿಕೆ' ಮ್ಹಳ್ಳ್ಯಾ ನಾಂವಾರ್ ಕಲಾ ಪ್ರದರ್ಶನ್ ದಿಂವ್ಚೊ ಏಕ್ಯೆಕ್ ನೊಂದಾಯಿತ್ ಸಂಸ್ಥೊ. ದೇಸ್‍ಭರ್ ಹ್ಯಾ ಪಂಗ್ಡಾನ್ ರಾಜ್ಯ್ ಆನಿ ರಾಷ್ಟ್ರ ಮಟ್ಟಾಚ್ಯಾ ಪ್ರತಿಷ್ಠಿತ್ ವೇದಿಂನಿ ಪ್ರದರ್ಶನ್ಯಾಂ ದಿಲ್ಯಾಂ, ಪ್ರಶಸ್ತ್ಯೊ ಪುರಸ್ಕಾರ್‌ಯೀ ಆಪ್ಣಾಯ್ಲ್ಯಾ.

ಶ್ರೀ ಗೋಪಾಲ ಗೌಡಾನ್ ಕುಡ್ಮಿ ಸಮಾಜ್, ಸಂಸ್ಕೃತಿ ಆನಿ ಜಾನಪದಾವಿಶಿಂ ಸಂಶೋಧನ್ ಕರ್ತಲ್ಯಾಂಕ್ ಸಂಪನ್ಮೂಲ್ ವ್ಯಕ್ತಿ ಜಾವ್ನ್ ಮಾಹೆತ್ ದಿಲ್ಯಾ. ಸ್ವಿಜರ್ಲೆಂಡ್, ಕೆನಡಾ, ಜರ್ಮನಿ, ಇಂಗ್ಲೆಂಡ್ ಥ್ಯಾವ್ನ್ ವಿದೇಶೀ ಅಧ್ಯಯನ್ ಕಾರಾಂನಿ ಯೇವ್ನ್ ಹಾಚೆ ಥಾವ್ನ್ ಡೊಕ್ಯುಮೆಂಟೇಶನ್ ಕರುನ್ ಘೆತ್ಲಾಂ. ಕುಡ್ಮ್ಯಾಂ ವಿಶಿಂ ಗೋಪಾಲ ಗೌಡಾನ್ ಬರಯಿಲ್ಲಿಂ ಲೇಖನಾಂ ವಿವಿಧ್ ಸಮೂಹ್ ಮಾಧ್ಯಮಾಂನಿ, ಸಂಶೋಧನಾ ಗ್ರಂಥಾಂನಿ ಪ್ರಸಾರ್, ಪ್ರಗಟ್ ಜಾಲ್ಯಾಂ. ವಿವಿಧ್ ಕಾರ್ಯಾಗಾರಾಂನಿ, ವಿಚಾರ್ ಗೋಷ್ಠಿಂನಿ, ಆಕಾಶ್‍ವಾಣಿ ದೂರದರ್ಶನಾಂಚ್ಯಾ ಕಾರ್ಯಕ್ರಮಾಂನಿ ಭಾಗ್ ಘೇವ್ನ್, ಪ್ರಬಂಧ್, ಭಾಷಣಾಂ, ವಿಚಾರ್ ಮಂಡನ್ ಕೆಲ್ಯಾಂ.

ಹಾಚ್ಯಾ ಪಂಗ್ಡಾಕ್ ಕೇಂದ್ರ್ ಸರ್ಕಾರಾಚ್ಯಾ ಪ್ರವಾಸೋದ್ಯಮ್ ಆನಿ ಸಂಸ್ಕೃತಿ ಇಲಾಖ್ಯಾ ಥಾವ್ನ್ ಸ್ಕಾಲರ್‌ಶಿಪ್ ಮೆಳ್ಳಾಂ. ಕೊಂಕಣಿ ಅಕಾಡೆಮಿನ್ ತಾಕಾ 2002 ವರ್ಸಾಚೆ 'ಗೌರವ್ ಜಾನಪದ್ ಪ್ರಶಸ್ತಿ' ದೀವ್ನ್ ಮಾನ್ ಕೆಲಾ, ಹ್ಯಾ ಭಾಯ್ರ್, ವಿವಿಧ್ ನಾವಾಡ್ದಿಕ್ ಸಂಘ್ ಸಂಸ್ಥ್ಯಾನಿ ಉಂಚ್ಲ್ಯಾ ವೇದಿಂರ್ 16 ಪಾವ್ಟಿಂ ಸನ್ಮಾನ್ ಕೆಲಾ. 2010 ನವಂಬರಾಂತ್ ಮಾಂಡ್ ಸೊಭಾಣ್ ಸಂಸ್ಥ್ಯಾನ್ ಚಲಯಿಲ್ಲ್ಯಾ ವಿಶ್ವಕೊಂಕಣಿ ಸಾಂಸ್ಕೃತಿಕ್ ಸಮ್ಮೇಳಾಂತ್ ಹಾಚ್ಯಾ ಪಂಗ್ಡಾಕ್ ರಾಷ್ಟ್ರಪತಿ ಥಾವ್ನ್ ಸನ್ಮಾನ್ ಕರಯ್ಲಾ.

ಕೊಂಕಣಿ ಅಕಾಡೆಮಿ ಸ್ಥಾಪನ್ ಜಾಲ್ಲ್ಯಾ 1994 ಥಾವ್ನ್ 5 ವರ್ಸಾಂ, ದೋನ್ ಆವ್ದೆಂಕ್ ತೋ ಅಕಾಡೆಮಿ ಸಾಂದೋ ಆಸಲ್ಲೊ. ತಾಣಿಂ ಸಂಗ್ರಹ್ ಕೆಲ್ಲಿಂ ಗುಮ್ಟಾಂ ಆನಿ ತೊಣಿಯಾಂ ಪೊದಾಂಚೊ ಬೂಕ್ ಅಕಾಡೆಮಿನ್ 2000 ಇಸ್ವೆಂತ್ ಪ್ರಗಟ್ ಕೆಲಾ. ಹಾಚ್ಯಾ ಸಂಗ್ರಹಾಂತ್ ಕುಡ್ಮಿ ಬೊಲಿಚೊ ಲ್ಹಾನ್ ಶಬ್ದ್‍ಕೋಶ್, ವ್ಹಾಡಿಕೆ ಸಂಪ್ರದಾಯಾಚಿಂ ಗಾಣಾಂ, ಬಾಳ್‍ಗಿತಾಂ, ಕುಡ್ಮಿ ಕುಳಿ, ಆಚಾರ್ ವಿಚಾರ್, ಚರಿತ್ರಾಕ್ ಸಂಬಂಧ್ ಜಾಲ್ಲೆಂ ಭಂಡಾರ್‍ಚ್ ಆಸಾ. ಕುಡ್ಮಿ ಸಮುದಾಯಾಚೊ ಎಕ್ಲೊ ಪ್ರತಿಭಾವಂತ್ ಕಲಾಕಾರ್, ಜಾನಪದ್ ಸಂಸ್ಕೃತಿಚೊ ಸಾದೊ ಸರಳ್ ಪ್ರಾತಿನಿಧಿಕ್ ವ್ಯಕ್ತಿ ಗೋಪಾಲಗೌಡಾಚೆಂ ಸಂಗ್ರಹ್ ಸಾಹಿತ್ಯ್ ಮುಕಾರ್ ಕುಡ್ಮಿ ಜನಾಂಗಾವಿಶಿಂ ಸಮಗ್ರ್ ಸಂಶೋಧನ್ ಕರ್ತಲ್ಯಾಂಕ್ ಪ್ರಯೋಜನಾಕ್ ಪಡ್ತಲೆಂ.

